# ಜೀವನ ನಾಟಕ

ಕಥಾಸಂಕಲನ



ಎಂ. ವಿ. ಸೀತಾರಾಮಯ್ಯ

ರಾಘವ ಪ್ರಕಾಶನ
ಬೆಂಗಳೂರು–೧೯

ಬೆಲೆ : ರೂ. ೨-೦೦

# ನೇಪಥ್ಯ ದರ್ಶನ

ಮುಂದೆ ನಿಮ್ಮ ಬಗೆಗಣ್ಣಿನೆದುರು ನಡೆಯಲಿರುವುದು, ನಮ್ಮ ನೆರೆಹೊರೆಯವರು ಬಹುಕಾಲದ ಹಿಂದೆ ಯಶಸ್ವಿಯಾಗಿ ಅಭಿನಯಿಸಿದ 'ಜೀವನ ನಾಟಕ.'

ನಮ್ಮ ನೆರೆಹೊರೆಯವರು ಎಂದರೆ ಬೆಂಗಳೂರಿನಲ್ಲಿ ಈಗ ನಾನು ವಾಸವಾಗಿರುವ, ಅಥವಾ ಹಿಂದೆ ವಾಸವಾಗಿದ್ದ, ಈ ಬೀದಿಯ ಆ ಬೀದಿಯ ಜನ ಎಂದು ಭಾವಿಸಬೇಡಿ. ಈ ಮಹಾನಗರದಲ್ಲಿ, ವಿಶೇಷವಾಗಿ ವಿಸ್ತರಣಗಳಲ್ಲಿ, ನೆರೆಹೊರೆ ಎಂದರೆ ರೈಲು ಪ್ರಯಾಣದ ಸ್ನೇಹಿತರಂತೆಯೇ : ಈವೊತ್ತು ಇದ್ದವರು ನಾಳೆ ಇಲ್ಲ; ಕಾರಣ, ಸ್ವಂತ ಮನೆ ಇರುವವನಿಗೆ ಒಂದೇ ಮನೆ, ಬಾಡಿಗೆ ಕೊಡುವವನಿಗೆ ಊರೆಲ್ಲಾ ಮನೆ. ಆದರೆ, ಈಗ ಮಾತ್ರ, ನಾನು ಒಂದು 'ಗುಬ್ಬಿಯ ಸಂಸಾರದ ಗೂಡು' ಅಂತ ಮಾಡಿಕೊಂಡು ಹತ್ತು ವರ್ಷಕ್ಕೆ ಬಂತು. ಈ ಹತ್ತು ವರ್ಷದ ಅವಧಿಯಲ್ಲಿ, ಅಕ್ಕಪಕ್ಕದ ಮನೆಗಳಿಗೆ, ಎದುರು ಮನೆಗಳಿಗೆ, ಎರಡು ಮೂರು ವರ್ಷಕ್ಕೊಮ್ಮೆ ಬೇರೆ ಬೇರೆ ಸಂಸಾರಗಳು ಬಂದು ಹೋಗಿವೆ. ನಮ್ಮ ಮನೆಯ ಹೆಂಗಸರು ನೆರೆಮನೆಯ ಹೆಂಗಸರಲ್ಲಿ ಉಪ್ಪಿನ ಸಾಲ ಕೇಳುವಷ್ಟು ಪರಿಚಯ ಬಲಿಯುವುದರೊಳಗೆ ಅವರು ಆ ಮನೆ ಬಿಟ್ಟು ಬೇರೆಯ ಮನೆಗೋ, ಬೇರೆಯ ಊರಿಗೋ ಎಡೆಕದಲಿರುತ್ತಾರೆ. ಹಬ್ಬದ ದಿನಗಳಲ್ಲಿ ಹೆಂಗಸರು ಒಬ್ಬರನ್ನೊಬ್ಬರು ಅರಿಸಿನ ಕುಂಕುಮಕ್ಕೋ ಆರತಿಯಕ್ಷತೆಗೊ ಕರೆಯುವ ರೂಢಿ ಬೆಂಗಳೂರಿನಲ್ಲೂ ಅಳಿಯದೆ ಇರುವುದರಿಂದ, ಅವರು ನಿಧಾನವಾಗಿಯಾದರೂ ತಮ್ಮ ತಮ್ಮಲ್ಲಿ ಪರಿಚಯ ಬೆಳಸಿಕೊಳ್ಳುತ್ತಾರೆ. ಆದರೆ, ವರ್ಷಗಳು ಸಂದರೂ ಗಂಡಸರ ಮುಖಾಬಿಲೆ ಆಗುವುದೇ ಕಷ್ಟ. ಆದ್ದರಿಂದ, ಈ ಊರಿನಲ್ಲಿ 'ನಮ್ಮ ನೆರೆಹೊರೆಯವರು' ಯಾರೆಂದು ಪರಿಚಯಮಾಡಿಕೊಡುವುದು ಅಸಾಧ್ಯ. ಅದಕ್ಕೋಸ್ಕರ ಮೊದಲೇ ಕೊಟ್ಟ ಮುನ್ನೆಚ್ಚರಿಕೆ.

ಹೀಗಿರುವುದರಿಂದ, 'ನಮ್ಮ ನೆರೆಹೊರೆಯವರು' ಎಂದರೆ, ಈಗಲೂ ನಮ್ಮ ಸ್ವಂತ ಮನೆ ಇರುವ ಮೈಸೂರು ನಗರದ ಒಂದು ಬೀದಿಯ ಕೆಲವಂದಿ.

ಅವರ ಪರಿಚಯಮಾಡಿಕೊಡುವ ಮುನ್ನ, ಅವರ ನೆಲೆವೀಡಾದ 'ನಮ್ಮಬೀದಿ'ಯ ಸ್ವರೂಪವನ್ನು, ಸ್ವಲ್ಪಮಟ್ಟಿಗೆ ಪರಿಚಯ ಮಾಡಿಕೊಡುವುದು ಅಗತ್ಯ.

ಮೈಸೂರು ಅರಮನೆಯ ದಕ್ಷಿಣ ಭಾಗದಲ್ಲಿ ಕೆಲವು ಅಗ್ರಹಾರಗಳಿವೆ. ಅವೆಲ್ಲ ಒಟ್ಟುಗೂಡಿ, 'ಹಳೆಯ ಅಗ್ರಹಾರ' ಎಂದು ಪ್ರಸಿದ್ಧವಾಗಿತ್ತು ಹಿಂದೊಮ್ಮೆ. ಅಗ್ರಹಾರ ಎಂದರೆ ಹಾರುವರ ಕೇರಿ ಎಂದು ಪ್ರತ್ಯೇಕವಾಗಿ ಹೇಳಲೇಬೇಕಾಗಿಲ್ಲ. ಒಂದೇ ಬೀದಿಯಿರುವ ಅಗ್ರಹಾರವೂ ಉಂಟು, ಎರಡು ಮೂರು ಬೀದಿಗಳಿರುವವೂ ಉಂಟು. ಒಂದು ಅಗ್ರಹಾರದಲ್ಲಿ, ತ್ರಿಮತಸ್ಥರಿಗೂ ಒಂದೊಂದು ಬೀದಿ ಪ್ರತ್ಯೇಕವಾಗಿದೆ. ಈ ಅಗ್ರಹಾರಗಳ ಬಹು ಸಂಖ್ಯೆಯ ಮನೆಗಳು ಮೈಸೂರು ರಾಜಮನೆತನದವರಿಂದ ಬ್ರಾಹ್ಮಣರಿಗೆ ದಾನವಾಗಿ ಬಂದವು. (ಆದರೆ ನಮ್ಮ ಅಗ್ರಹಾರದ ಮನೆಗಳು ದಾನವಾಗಿ ಬಂದುವಲ್ಲ. ಕೋಟೆಯಲ್ಲಿದ್ದ ಮನೆಗಳನ್ನು ಒಡೆದು ಅಲ್ಲಿನ ಹಾರುವರಿಗೆ ಉಚ್ಚಾಟನೆಯಾದಾಗ, ಈ ಅಗ್ರಹಾರ ನಿರ್ಮಾಣವಾಯಿತು, ಬಡ ಹಾರುವರಿಂದ.) ಎಂದಮೇಲೆ ಅವು ಬಂಗಲೆಗಳಲ್ಲ ಎಂದು ನೀವು ಸುಲಭವಾಗಿ ಊಹಿಸಿಕೊಳ್ಳಬಹುದು. ಗುಡಿಸಲುಗಳೂ ಅಲ್ಲ. ಹಾಗಾದರೆ ಎಂಥ ಮನೆಗಳು ಎಂದು ನೀವು ಕೇಳಬಹುದು. ಮೈಸೂರಿನ ಪರಿಭಾಷೆಯಲ್ಲೇ ವಿವರಿಸುವುದಾದರೆ, ಎರಡಂಕಣದಿಂದ ಹಿಡಿದು ಐದಂಕಣದವರೆಗೆ ದಾಯವುಳ್ಳ, ಮಣ್ಣಿನಿಂದ ಕಟ್ಟಿದ 'ಪುಟದ ಗೋಡೆ'ಯ, ನಾಡು ಹೆಂಚಿನ ಮೇಲ್ಹಾವಣಿಯ, ಉಪ್ಪರಿಗೆ ಇಲ್ಲದ, ಮನೆಗಳು. ಅವು ಒಂದಕ್ಕೊಂದು ಹದ್ದಿಕೊಂಡಿರುತ್ತವೆ; ಮನೆಗಳನ್ನು ಪ್ರತ್ಯೇಕಿಸುವ ಕಟ್ಟಡ ಎಂದರೆ ನಡುವಣ ಗೋಡೆ, ಅಷ್ಟೆ. ಉಳಿದಂತೆ, ಬೀದಿಯ ಒಂದು ಸಾಲಿನ ಮನೆಗಳನ್ನೆಲ್ಲಾ ಒಟ್ಟಿಗೆ ಕಟ್ಟಿ, ಉದ್ದಕ್ಕೂ ಒಂದೇ ಹಂದರ ಬಿಗಿದು, ಎಲ್ಲ ಮನೆಗಳಿಗೂ ಏಕವಾಗಿ ಹೆಂಚು ಹೊದಿಸಿದಂತೆ ಕಾಣುತ್ತದೆ. ಬೀದಿಯವರ ಕೂಡುಬಾಳ್ವೆಗೆ ಈ ಕೂಡುಮನೆ ಸಾಲು ಸಂಕೇತ ಎನ್ನಬಹುದು. ಬೀದಿಯಲ್ಲಿ ಒಂದು ಹೆಣ ಬಿದ್ದಿತೆನ್ನಿ; ಅದನ್ನು ಎತ್ತುವವರೆಗೂ ಆ ಸಾಲಿನ ಮನೆಗಳಲ್ಲಿ ಒಲೆ ಹೊತ್ತಿಸುವ ಹಾಗಿಲ್ಲ. ಈ ಕಾರಣದಿಂದ, ಹೆಣವನ್ನು ರುದ್ರಭೂಮಿಗೆ ಸಾಗಿಸುವ ಕಾರ್ಯದಲ್ಲಿ ಬೀದಿಯವರೆಲ್ಲ ಉತ್ಸಾಹದಿಂದ ಸಹಕರಿಸುತ್ತಾರೆ; ವಾಹಕರು ಸಿಕ್ಕಲಿಲ್ಲವೋ, ತಾವೇ ಹೆಗಲು ಕೊಡಲು ಮುಂದೆ ಬರುತ್ತಾರೆ. (ಇದೆಲ್ಲ ಹಿಂದಿನ ಮಾತು ಎಂದು ಇಟ್ಟುಕೊಳ್ಳಿ. ಹೆಣ ಹೊರುವಷ್ಟು ಶಕ್ತರೆ, ವಿರಕ್ತರೆ, ಪರೋಪಕಾರಾಸಕ್ತರೆ, ನಮ್ಮ ಇಂದಿನ ಜನ?) ನಮ್ಮ ದೊಡ್ಡಪ್ಪನವರು ತಾವು ಸತ್ತ ಮೇಲೆ ನೆರೆಹೊರೆಯವರಲ್ಲಿ ಯಾರು ಯಾರು ತಮ್ಮ ಶವವನ್ನು ಹೊರಬೇಕೆಂಬುದನ್ನು ಮೂರು ತಿಂಗಳು ಮೊದಲೇ ನಿಷ್ಕರ್ಷೆಮಾಡಿಬಿಟ್ಟಿದ್ದರಂತೆ. ಅವರು ಇಷ್ಟ

ಪಟ್ಟ ಹಾಗೆಯೇ ನೆರವೇರಿತು. ದಿಕ್ಕಿಲ್ಲದ ಭಿಕ್ಷಾನ್ನದ ಭಾಗೀರಥಮ್ಮ ಕಾಲ ವಾದಾಗ ಅವಳಿಗೆ ಗತಿ ಕಾಣಿಸಿದವರು ಬೀದಿಯವರೇ. ಅಶುಭ ಪ್ರಕರಣ ವನ್ನು ಮೊದಲು ಎತ್ತಿಕೊಂಡೆ ; ದಯವಿಟ್ಟು ಕ್ಷಮಿಸಬೇಕು. ಶುಭಕಾರ್ಯ ವಾದರೂ ಅಷ್ಟೆ : ಬೀದಿಗೆಲ್ಲ ಸಂಭ್ರಮ, ಸಡಗರ, ಔತಣ. ಮದುವೆ ಮುಂಜಿಗಳಾದರೆ, ಹಳ್ಳಿಗಾಡಿನಲ್ಲಿ ಊರ ಸಮಾರಾಧನೆ ಎನ್ನುವಂತೆ, ಬೀದಿ ಸಮಾರಾಧನೆ ಆಗಬೇಕು. (ಈಗ ಕಾಲ ನಾಜೂಕಾಗಿ, ಈ ನಮ್ಮ ಬೀದಿ ಯಲ್ಲೂ ಪರಿಸ್ಥಿತಿ ಮೊದಲಿನಂತೆ ಇಲ್ಲ ; 'ನೆರೆಹೊರೆ' ಹೋಗಿ, ನೆರೆ - ಹೊರೆ ಎನ್ನುವ ಕಾಲ ಬಂದಿದೆ.) ರಾಮನವಮಿಯಂದು ನಾವು (ಎಂದರೆ ಅಂದು ಬಾಲಕರಾಗಿದ್ದ ನಾವು) ಊಟ ಎಲ್ಲಿ ಮಾಡುತ್ತಿದ್ದೆವು ?

ಮೇಲೆ ವಿವರಿಸಿರುವಂತಹ ಒಂದು ಅಗ್ರಹಾರದಲ್ಲಿ ನಮ್ಮದೂ ಒಂದು ಬೀದಿ. ನಮ್ಮ ಬೀದಿ ಎಂದರೆ ನಮಗೆ ಬಲು ಹೆಮ್ಮೆ ಆಗ. ಅದಕ್ಕೆ ಕಾರಣ ಗಳು ಹಲವಾರು. ಬೀದಿಯ ಪೂರ್ವದ ಕೊನೆ ತಗ್ಗು, ಪಶ್ಚಿಮದ ಕೊನೆ ತಿಟ್ಟು. ಆ ತಿಟ್ಟನಲ್ಲಿ ನಿಂತರೆ, ಚಾಮುಂಡಿಯ ಬೆಟ್ಟದ ಅಗ್ರಭಾಗ ಬಹು ಸುಂದರವಾಗಿ ಕಾಣುತ್ತದೆ. ಈ ದೃಶ್ಯ ಸೌಂದರ್ಯಾನುಭವದ ಭಾಗ್ಯ ಉಳಿದ ಮೂರು ಬೀದಿ ಗಳಿಗೆ ಇಲ್ಲ. ಇಷ್ಟೇ ಅಲ್ಲ. ಸುತ್ತಮುತ್ತಣಿಂದ ಬರುವ ಯಾವ ದೇವರ ಉತ್ಸವವೇ ಆಗಲಿ, ಮದುವೆಯಾದ ಗಂಡುಹೆಣ್ಣಿನ ಮೆರೆವಣಿಗೆಯಾಗಲಿ, ಕಡೆಗೆ ಚಾಮುಂಡಿಬೆಟ್ಟದ ತಪ್ಪಲ ಹತ್ತಿರವಿರುವ ರುದ್ರಭೂಮಿಗೆ ಪಯಣಬೆಳಸಬೇಕಾದ ಪರಲೋಕಯಾತ್ರಿಕರ ಮೆರೆವಣಿಗೆಯಾಗಲಿ, ಬೀದಿಗೆ ಪೂರ್ವಕ್ಕಿರುವ ಆನೆ ಕರೋಟಿಯ ಆನೆಗಳು ನಮ್ಮ ಬೀದಿಯಲ್ಲೇ ಹಾದುಹೋಗಬೇಕು. ಹೋಗಿ ಬರಬೇಕಾದರೂ ನಮ್ಮ ವಿಶಾಲವಾದ ಬೀದಿಯಲ್ಲೆ. ಇನ್ನುಳಿದ ಬೀದಿ ಗಳಲ್ಲಿ ಆನೆಗಳನ್ನು ನಡೆಸಿಕೊಂಡು ಹೋಗಲು ಮಾವಟಿಗರು ಹೆದರು ತ್ತಿದ್ದರು ; ಬೀದಿಗಳ ಅಗಲ ಅಷ್ಟು ಕಿರಿದು. ನಮ್ಮ ಬೀದಿಯಲ್ಲಿ ಯಾದರೋ, ಎರಡು ಮೂರು ಮರಿಗಳೊಂದಿಗೆ ಜೋಡಿಯಾನೆ ಗಂಭೀರವಾಗಿ ಘಂಟಾನಾದಗೈಯ್ಯುತ್ತ ನಡೆದುಹೋಗುಹುದಾಗಿತ್ತು. ಅಯ್ಯೊ, ಇಂದಿನ ತಲೆಮಾರಿನ ಶಿಶುಲೋಕ ಆ ದೃಶ್ಯವೈಭವ ಸೌಭಾಗ್ಯದಿಂದ ವಂಚಿತ !

ನಮ್ಮ ಬೀದಿಯ ವೈಶಿಷ್ಟ್ಯ ಇಷ್ಟಕ್ಕೇ ಮುಗಿಯಲಿಲ್ಲ. ಕಾಲಕ್ಕೆ ಅನು ಗುಣವಾದ ಪರಿವರ್ತನೆಗಳು ಆಗಿರುವುದೂ ನಮ್ಮ ಬೀದಿಯಲ್ಲೆ. ನಲ್ಲಿ ಎಲೆಕ್ಟ್ರಿಕ್ ದೀಪ ಮೊದಲು ಬಂದದ್ದು ನಮ್ಮ ಬೀದಿಗೆ. ಮೊದಲು ಟಾರಿನ ರುಚಿನೋಡಿದ್ದು ನಮ್ಮ ಬೀದಿ. ನಮ್ಮ ಬೀದಿಯ ಮನೆಗಳೂ ಅಗ್ರಹಾರದ ಇತರ ಬೀದಿಗಳಲ್ಲಿರು ವಂತೆ ಮುಂಗಡೆ ಕಂಬಸಾಲಿನ ಜಗಲಿಯ ಮನೆಗಳಾದರೂ, ಕಾಲಕ್ರಮದಲ್ಲಿ

ಮಾದರಿಗಾಗಿ ಎಂಬಂತೆ ಒಂದೊಂದಾಗಿ ಮಂಗಳೂರು ಹೆಂಚಿನ ಮನೆ ಎರಡು ಮೂರು, ತಾರಸಿಯ ಮಹಡಿಮನೆ ಒಂದೆರಡು, ತೀರ ಇತ್ತೀಚೆಗೆ ಸಿಮೆಂಟ್ ಕಾಂಕ್ರೀಟಿನ ಮನೆ ಒಂದು—ಹೀಗೆ ಎದ್ದಿವೆ. ನವನಾಗರಿಕತೆಯ ನಾಗಾಲೋಟದ ಬೆನ್ನೇರಲು ಸಾಹಸಪಟ್ಟಿರುವುದೂ ನಮ್ಮ ಬೀದಿಯೇ: ಜುಟ್ಟು ಜನಿವಾರಗಳ ಹೆಚ್ಚಳದ ಕಾಲದಲ್ಲಿ ಮೊದಲು 'ಕ್ರಾಪ್‌ಕಟ್' ಮಾಡಿಸಿಕೊಂಡವರು ನಮ್ಮ ಬೀದಿಯ ಒಬ್ಬಿಬ್ಬರು ದಿಟ್ಟ ತರುಣರು ; (ಇವರಲ್ಲಿ ನಾನೂ ಒಬ್ಬ) ಮೊತ್ತಮೊದಲು ಕಾಲೇಜು ಮೆಟ್ಟಲು ತುಳಿದ ಬೃಹಸ್ಪತಿಗಳು ನಮ್ಮ ಬೀದಿಯವರು ; ಮಹಾರಾಣಿ ಹೈಸ್ಕೂಲಿನ ಕರೆ ಮೊದಲು ಮುಟ್ಟಿದ್ದು ನಮ್ಮ ಬೀದಿಯ ಒಬ್ಬ ತರುಣಿ ವಿಧವೆಗೆ (ಗಂಡ ಇಲ್ಲದವಳು ಎಂದಷ್ಟೆ). ಜಾತಿಭೇದವಿಲ್ಲದೆ ದಾಸರು, ದಾಸಯ್ಯಗಳು, ಬುಡುಬುಡಿಕೆಯವರು, ಜಂಗಮಯ್ಯಗಳು ಮುಂತಾದ ಬಗೆಬಗೆಯ ಭಿಕ್ಷುಕಪಡೆ ಹೆಚ್ಚಾಗಿ ದಾಳಿಯಿಡುವುದು ನಮ್ಮ ಶ್ರೀಮಂತ ಬೀದಿಗೆ; ಪೌರಸಭೆಯ ಜನನ ಮರಣ ಸಂಖ್ಯೆಗೆ ಹೆಚ್ಚಿನ ಅಂಕಿ ಕೂಡಿಸಿರುವುದೂ ನಮ್ಮ ಬಡ ಬೀದಿ. ಈಗ ಹಾಲಿವುಡ್ಡಿನ ಪ್ರಖ್ಯಾತ ಸಿನಿಮಾನಟ ಎಂದು ಜಗತ್‌ಪ್ರಸಿದ್ಧನಾದ 'ಮೈಸೂರಿನ ಸಾಬು' ನಮ್ಮ ಬೀದಿಯಲ್ಲಿ ತನ್ನ ತಂದೆಯೊಂದಿಗೆ ಆನೆಯಮೇಲೆ ಕುಳಿತು ಓಡಿಯಾಡಿದವನೆ ಎಂದರೆ ನಂಬುತ್ತೀರಾ ? ಅವನು ಜಗತ್‌ಪ್ರಸಿದ್ಧನಾದ ಮೇಲೆ, ಆ ನಮ್ಮ ನೆಚ್ಚಿನ ನಟ 'ನಮ್ಮ ಬೀದಿಯಲ್ಲಿ ಓಡಿಯಾಡಿದ ಹುಡುಗ' ಎಂದುಕೊಳ್ಳುವ ಅವಕಾಶವಿರುವುದೂ ಒಂದು ಹೆಮ್ಮೆಯ ಸಂಗತಿಯೇ ಅಲ್ಲವೆ ?

ಇದಿಷ್ಟು ನಮ್ಮ ಬೀದಿಯ ಬಹಿರಂಗದ ಬಹು ಸ್ಥೂಲ ಪರಿಚಯ. ಆದರೆ, ಅದರ ಅಂತರಂಗ ಬೇರೆ. ನಿಜವಾದ, ಜೀವಂತವಾದ ಬೀದಿ ಎಂದರೆ ಅಲ್ಲಿನ ಮನೆಗಳಲ್ಲ, ಅಲ್ಲಿ ಆಗೊಮ್ಮೆ ಈಗೊಮ್ಮೆ ಬಂದು ಹೋಗುವ ಆಗಂತುಕ ಜನ ಅಲ್ಲ ; ಆ ಮನೆಗಳಲ್ಲಿ ತಲೆತಲಾಂತರಗಳಿಂದ ಅಲ್ಲದಿದ್ದರೂ ಹಲವಾರು ವರ್ಷಗಳಾದರೂ ಸ್ಥಿರವಾಗಿ ನೆಲಸಿರುವ ಜನ, ಮತ್ತು ಯಾವುದಾದರೂ ಕಾರಣದಿಂದ ಆ ಬೀದಿಗೆ ಪದೇ ಪದೇ ಬಂದುಹೋಗಿ ಅವರಿಗೆ ಚಿರಪರಿಚಿತರಾದ ಜನ. ಉದಾಹರಣೆಗೆ, ಅಂಚೆ ಅನಂತಯ್ಯ, ಆನೆ ಕಾಲು ರಾಮರಾಯರು, ಹಾಲಿನ ಹನುಮಕ್ಕ,ಅಗಸರ ತಿಮ್ಮಯ್ಯ, ಕಡಲೆಪುರಿಯ ಕೆಂಪಮ್ಮ, ಕ್ಷೌರದ ಪುಟ್ಟಯ್ಯ, ಒಂಟಿ ಸಂಜೀವಯ್ಯ ಇತ್ಯಾದಿ—ಇವರೆಲ್ಲ ನಮ್ಮ ಬೀದಿಯಲ್ಲಿ ವಾಸವಾಗಿದ್ದವರಲ್ಲ. ಆದರೆ, ನಮ್ಮ ಬೀದಿಯ ಜನದ ಜೀವನದೊಂದಿಗೆ ಅವರದ್ದೂ ಉಪನದಿಯಂತೆ ಸೇರಿಕೊಂಡು, ಬೇರ್ಪಡಿಸಲಾಗದಂತೆ ಬೆರೆತಿತ್ತು. ನಮ್ಮ ಬೀದಿಯಲ್ಲಿ ಈ ಜನಜೀವನದ ಪ್ರವಾಹ ಸುಮಾರು ಅರವತ್ತು ಎಪ್ಪತ್ತು ವರ್ಷಗಳಿಂದ

ಅವಿಚ್ಛಿನ್ನವಾಗಿ ಹರಿದುಕೊಂಡು ಹೋಗಿದೆ. ಎರಡು ಸಾಲು ಮನೆಗಳೇ ಈ ಬಾಳ ಹೊಳೆಯ ಎರಡು ದಡಗಳು ; ಅಥವಾ ಜೀವನ ನಾಟಕದ ರಂಗಮಂಚ. ಹೊಸ ಒಡಲು, ಹೊಸ ಮುಖ ಪಡೆದಿರುವ ನಾಲ್ಕಾರು ಮನೆ ಹೊರತಾಗಿ, ಎಲ್ಲ ಅವೇ ಹೆಂಚಿನ ಮನೆಗಳು. ಎಂದರೆ, ದಡಗಳು ಅವೇ ; ನಡುವೆ, ಹಳೆಯ ನೀರು ಕೊಚ್ಚಿಹೋಗಿದೆ ; ಹೊಸ ನೀರು ಬಂದು ಸೇರಿದೆ. ಹಳೆಯ ನರೆಗೂದಲ ತಲೆಗಳೆಲ್ಲ ಎಂದೋ ಬಿದ್ದುಹೋದವು ; (ಹಳೆಯ ಕಾಲದ ಮನೆಗಳೇ ಆದರೂ) ಹೊಸ ತಲೆಗಳು ಹೊಸ ಕಾಲವ ಶಿರೋಭೂಷಣಗಳೊಂದಿಗೆ, ಕೇಶಾಲಂಕಾರಗಳೊಂದಿಗೆ, ಚಂದ್ರಲೋಕವ ಪಯಣದತ್ತ ದಿಟ್ಟಿನಟ್ಟು ಮೆರೆಯುತ್ತಿವೆ. ಅಂದು ನನ್ನ ಕಣ್ಣಿಗೆ ಬೀಳುತ್ತಿದ್ದವು – ಮನೆಯೊಗೆತವ ಮೇಲು ಕೋಟೆ ಅಂಜಿನ ಪಂಚೆ, ಕಸೆ ಅಂಗಿ ಇಲ್ಲ ನಿಲುವಂಗಿ, ಓರೆಕೋರೆ ರುಮಾಲು, ಹಣೆತುಂಬ ವಿಭೂತಿ ಇಲ್ಲ ಗಂಧಾಕ್ಷತೆ ಇಲ್ಲ ನಾಮ ಇಲ್ಲ ಮುದ್ರೆ ಮತ್ತು ಅಂಗಾರಾಕ್ಷತೆ ; ಹುಡುಗರಾದರೆ ಹಾಸನದ ಟೋಪಿ, ಅಣ್ಣ ತೊಟ್ಟು ಬಿಟ್ಟ ಹಳೆಯ ಅಂಗಿ, ತಡಪುಪಂಚೆ ; ಜೊತೆಗೆ, ಅರ್ಧಾಂಗಿಯರ ತಾತಾಚಾರಿ ಮಗ್ಗದ ಸೀರೆ, ಕುತ್ತಾಲಸೀರೆ, ಹೆಸರುಪಪ್ಪಳಿ ಸೀರೆ, ಕಡಲೆಪಪ್ಪಳಿ ಸೀರೆ, ಧರ್ಮಾವರದ ಸೀರೆ, ಕೆಂಪಿನೋಲೆ, ಮೂಗುಬೊಟ್ಟು, ಬುಗಡಿ, ಚಳತಂಬು, ಹಣೆಯಲ್ಲಿ ದೊಡ್ಡದಾಗಿ ಅಡ್ಡ ಕುಂಕುಮ, ಕೆನ್ನೆ ಕೈ ಕಾಲು ತುಂಬ ಅರಿಶಿನ ; ಹುಡುಗಿಯರಾದರೆ ಕಸೆ ಪಾವುಡೆ ಕುಪ್ಪಸ. ಇಂದು ನಾನು ಮೈಸೂರಿಗೆ ಹೋದರೆ ನಮ್ಮ ಬೀದಿಯ ಜೀವನ ಪಟದಮೇಲೆ ಹಳೆಯ ಚಿತ್ರದ ಮೇಲೆ ಹೊಸಚಿತ್ರ ಬರೆದಿರುವುದು ಕಾಣಬರುತ್ತದೆ. ಇಲ್ಲಿನಂತೆ ಅಲ್ಲಿ ಹಳೆಯ ಚಿತ್ರ ಇನ್ನೂ ಪೂರ್ತಿಯಾಗಿ ಅಳಿಸಿಹೋಗಿಲ್ಲ. ಆದರೂ ಮೇಲೆ ಮೂಡಿ ಕಾಣುತ್ತಿರುವುದು ಹೊಸ ಚಿತ್ರವೇ. ಅದರ ಪರಿಚಯ ನನಗೇ ಇಲ್ಲ ; ನಿಮಗೆ ಹೇಗೆ ಮಾಡಿಕೊಡಲಿ ?

ಆದ್ದರಿಂದ, ನನ್ನ ಮಟ್ಟಿಗೆ, ನಮ್ಮ ಬೀದಿ ಎಂದರೆ ನಾನು ಅಲ್ಲಿ ಕಳೆದ ಬಾಲ್ಯ ಯೌವನಗಳಲ್ಲಿ ನನಗೆ ನಮ್ಮ ಮನೆಯವರಂತೆಯೇ ಚಿರಪರಿಚಿತರಾಗಿದ್ದ ನಮ್ಮ ನೆರೆಹೊರೆಯವರು. ಮೊದಲೇ ಹೇಳಿದಂತೆ, ಹಳೆಯ ತಲೆಗಳೆಲ್ಲಾ ಬಿದ್ದು ಹೋಗಿವೆ ; ನಾನು ಬಲ್ಲ ನನ್ನ ವಯಸ್ಸಿನ ಹೆಣ್ಣು ಮಕ್ಕಳೆಲ್ಲಾ ಬೇರೆ ಬೇರೆ ಊರಿಗೆ ಹೋಗಿದ್ದಾರೆ, ಗಂಡಂದಿರಿರುವ ಕಡೆ; ನನ್ನ ಒಡನಾಡಿಗಳು ನನ್ನಂತೆಯೇ ಒಲಿದುಬಂದ ಉದ್ಯೋಗದ ಕೈಹಿಡಿದು ಊರೂರು ಅಲೆಯುತ್ತಿದ್ದಾರೆ. ಹೀಗಾಗಿ ಮೈಸೂರಿನ ನಮ್ಮ ಬೀದಿಯಲ್ಲಿ ಇನ್ನೂ ನಮ್ಮ ಸ್ವಂತದ್ದೇ ಎನಿಸಿರುವ ನಮ್ಮ ಅನುಬಂಧಿಗಳ ಮನೆಗೆ ಹೋದಾಗಲೆಲ್ಲ ನಮ್ಮ ಅಂದಿನ ನೆರೆಹೊರೆಯವರ ಸವಿನೆನಪು ಮರುಕೊಳಿಸದೆ ಇರುವುದಿಲ್ಲ.

ನಮ್ಮ ನೆರೆಹೊರೆಯುವರ ಬಳಗ ದೊಡ್ಡದೇ. ಆದರೂ, ನನ್ನ ನೆನಪಿನ ಪೀಠದಮೇಲೆ ನಿಂತಿರುವ ಮೂರ್ತಿಗಳು ಕೆಲವು ಮಾತ್ರ. ಇಂಗ್ಲಿಷಿನಲ್ಲಿ out of sight, out of mind ("ಕಣ್ಣಿಗೆ ಬೀಳದವರು ನೆನಪಿಗೆ ಬರುವುದಿಲ್ಲ") ಎಂದು ಒಂದು ಉಕ್ತಿ ಇದೆ. ಇದು ಜೀವಂತ ವ್ಯಕ್ತಿಗಳಿಗೆ ಮಾತ್ರ ಅನ್ವಯಿಸತಕ್ಕದ್ದು ಎಂದು ತೋರುತ್ತದೆ. ಏಕೆಂದರೆ, ನಾನು ನಿಮಗೆ ಇನ್ನು ಮುಂದೆ ಪರಿಚಯ ಮಾಡಿಕೊಡಬೇಕೆಂದು ಹೊರಟಿರುವ ನಮ್ಮ ಬೀದಿಯ ಅಂದಿನ ಜೀವನ ನಾಟಕದ ಮುಖ್ಯ ಪಾತ್ರಗಳೆಲ್ಲ ಎಂದೆಂದಿಗೂ ಕಣ್ಮರೆಯಾಗಿರುವ ವ್ಯಕ್ತಿಗಳು. ಆದರೂ; ನನ್ನ ಬಾಲ್ಯ ಯೌವನಗಳನ್ನು ನೆನೆದಾಗಲೆಲ್ಲ ಅವರು ಜೀವಂತರಾಗಿಯೇ ನನ್ನ ಬಗೆಗಣ್ಮುಂದೆ ಬಂದು ಸುಳಿದಾಡುತ್ತಾರೆ; ನನ್ನ ಮನೋರಂಗದಲ್ಲಿ ಅವರ ರಸವತ್ತಾದ ನಾಟಕ ಮತ್ತೆ ಮತ್ತೆ ಅಭಿನೀತವಾಗುತ್ತದೆ. ಆ ವಿಶಾಲರಂಗಭೂಮಿಯಲ್ಲಿ ನಾನೊಬ್ಬನೇ ಪ್ರೇಕ್ಷಕ. ಒಬ್ಬನೇ ಪ್ರೇಕ್ಷಕನೆಂದು ಆ ನಾಟಕ ನಿಲ್ಲುವುದಿಲ್ಲ, ಕೆಡುವುದೂ ಇಲ್ಲ. ಆದರೂ, ಜೊತೆಯ ಪ್ರೇಕ್ಷಕರೊಂದಿಗೆ ನೋಡಿದ ದೃಶ್ಯಕಾವ್ಯದ ರಸಮಾಧುರ್ಯ ಹೆಚ್ಚು. ಏಕೆಂದರೆ, ಹಂಚಿಕೆಯಿಂದ ಕಡಮೆಯಾಗದೆ ಹೆಚ್ಚತಕ್ಕದ್ದು ಒಂದೇ : ಕಾವ್ಯರಸಾಸ್ವಾದನ. ಈ ಕಾರಣ, ನನ್ನ ನೆನಪಿನ ನಾಟಕದ (ಅಥವಾ ನಾಟಕಗಳ) ಕೆಲಕೆಲವು ದೃಶ್ಯಗಳನ್ನಾದರೂ ಇತರರೂ ನೋಡಿ ನಲಿಯಲೆಂದು ಅವನ್ನು ನುಡಿತೆರೆಯ ಮೇಲೆ ಪಡಿಮೂಡಿಸುವ ಸಾಹಸಮಾಡಿ, ಒಂದು "ಚಾಚಾ" ಪ್ರದರ್ಶನವನ್ನು ಅಣಿಗೊಳಿಸಿದ್ದೇನೆ, ಮುಂದೆ ಪರಾಂಬರಿಸಬೇಕು.

ನಾನು ಬಲ್ಲ ಎಲ್ಲ ಪಾತ್ರಗಳೂ ರಂಗದ ಮೇಲೆ ಈಗಲೇ ಕಾಣಿಸಿಕೊಳ್ಳುತ್ತಾರೆ ಎಂಬ ಭರವಸೆ ನನಗಿಲ್ಲ. ಆದ್ದರಿಂದ, ಹೇಗೂ ಈ 'ನೇಪಥ್ಯ'ಕ್ಕೆ ನಿಮ್ಮನ್ನು ಕರೆತಂದಾಗಿದೆ. ಇಲ್ಲಿಯೇ ಕೆಲವರ ಮುಂಪರಿಚಯ ಮಾಡಿಕೊಟ್ಟು ಬಿಡುತ್ತೇನೆ :

"ಇವರು............"

"ಮೊದಲೇ ಹೇಳಿದಿರಲ್ಲ, ಅಂಚೆ ಅನಂತಯ್ಯನವರು ಅಲ್ಲವೆ ?"

"ನಿಸ್ಸಂದೇಹವಾಗಿ. ಅಂಚೆ ಇಲಾಖೆಯ ಮುದ್ರೆ ಅವರ ಮೇಲೆ ಬಲವಾಗಿ ಬಿದ್ದಿದೆ. ಆದರೂ, ಅವರು ಉಡುಪು ಬದಲಾಯಿಸಿ ಬಿಟ್ಟರೆ, ಅವರ ಗುರುತೇ ಹತ್ತುವುದಿಲ್ಲ....ಅದರಲ್ಲಿಯೂ ಬ್ರಾಹ್ಮಣಾರ್ಥಕ್ಕೆ ಬಂದಾಗ...."

"ಯೂನಿಫಾರಮ್ಮಿನ ಮಹತ್ವ ; ವ್ಯಕ್ತಿತ್ವವನ್ನೇ ನುಂಗಿ ಬಿಡುತ್ತೆ.... ಈಕೆ ಯಾರು, ಹಾಲಿನ ಹನುಮಕ್ಕ ಅಂತ ಕಾಣುತ್ತೆ ?"

"ಅಲ್ಲ ಅಲ್ಲ. ಇವಳು ಕೊಟ್ಟಣದ ನೀಲಮ್ಮ. ಹಾಲಿನ ಹನುಮಕ್ಕ ನಮ್ಮ ಬೀದಿಯವಳೇ ಅಲ್ಲ ; ಆದರೂ, ಅವಳೂ ನಮ್ಮ ಬೀದಿಯವಳೇ ಎಂದು ನಮ್ಮ ಪರಿಗಣನೆ...."

"ಓ, ಹಾಗೋ ! ಈ ನೀಲಮ್ಮನ ಚೆಲುವು, ತುಂಬಿದ ಮೈಕಟ್ಟು, ಇವನ್ನೆಲ್ಲ ನೋಡಿ ಕ್ಷೀರಸಮುದ್ರದಲ್ಲಿ ಹುಟ್ಟಿದ ಹೆಣ್ಣು ಇವಳೇ ಎಂದು ತಿಳಿದು ಹಾಗೆ ಕೇಳಿದೆ...."

"ಈ ಚೆಲುವು, ಈ ನಿಲುವು, ಮೈ ಕಟ್ಟು ಮೈ ಸೊಬಗು ಎಲ್ಲ ಅವಳು ಮಾಡುವ ಕಾಯಕದ ಫಲ. ಅಲ್ಲಿ ನಿಂತಿದ್ದಾಳೆ ನೋಡಿ, ಅವಳು ಹಾಲಿನ ಹಾಗೆ ಬೆಳ್ಳಗಿಲ್ಲದಿದ್ದರೂ ಅಷ್ಟೇ ತೆಳ್ಳಗೆ, ಶ್ಯಾಮಸುಂದರಿ...."

"ಸರಿ ಸರಿ. ತಗಡಿನ ಡಬ್ಬ ಅಳತೆಪಾವು ಇದ್ದೇ ಇದೆಯಲ್ಲ, ಕೈಲಿ. ಅವಳ ಮೈ ತುಂಬ ಇರುವ ಒಡವೆಗೂ ಹಾಲಿನ ಡಬ್ಬಕ್ಕೂ ತಾಳಮೇಳವಾಗು ವುದಿಲ್ಲ, ಅಷ್ಟೆ....ಅದು ಯಾರು, ಯಾರದೋ ಕೈನೋಡುತ್ತ ಕುಳಿತಿದ್ದಾರಲ್ಲ ?"

"ಅವರೆ ? ಜಗಲಿ ಜೋಯಿಸರು...."

"ಜಗಲಿ ಜೋಯಿಸರು ! ಹಾಗೆಂದರೆ ?"

"ಇರಲಿ, ಮುಂದೆ ಗೊತ್ತಾಗುತ್ತೆ. ಅವರ ಎದುರಿಗೆ ಕೈತೋರಿಸುತ್ತ ಕುಳಿತಿರುವವನು ನಮ್ಮ ಗುಮಾಸ್ತೆ ಗುಂಡಪ್ಪ...."

"ನಿಮ್ಮ ಎಂದರೆ....?"

"ನಮ್ಮ ಮನೆಯಲ್ಲೇ ಇರುವಾತ ಅಂತ. ಆದರೆ, ನಮ್ಮ ಬಂಧು ಅಲ್ಲ; ಬಂಧುವಿಗಿಂತ ಹೆಚ್ಚು. ಆಬಾಲಬ್ರಹ್ಮಚಾರಿ...."

"ಮತ್ತೆ, ಆತನಿಗೆ ಭವಿಷ್ಯಚಿಂತೆ ಯಾಕೆ ?"

"ಭವಿಷ್ಯ ಚಿಂತೆ ಅಲ್ಲ. ಜೋಯಿಸರ ಜ್ಯೋತಿಷ್ಯಜ್ಞಾನ ಪರೀಕ್ಷಿಸುವ ಕುಹಕ ಸನ್ನಾಹ, ಅಷ್ಟೆ."

"ಅದು ಯಾರು, ದೂರದಲ್ಲಿ ಓಡಿಹೋಗುತ ಇದಾರಲ್ಲ, ಒಬ್ಬರು ಮಡಿ ಹೆಂಗಸರು, ಪುರಂದರದಾಸರು ಹೇಳುವ ಹಾಗೆ, 'ಮಡಿ ಮಡಿ ಎಂದು ಅಡಿ ಗಡಿಗ್ಹಾರುತ' ?"

"ಚೆನ್ನಾಗಿ ಊಹಿಸಿದಿರಿ. 'ಮಡಿ ಬಾಯಿ' ಅಂತಲೇ ಆಕೆಯ ಅಡ್ಡ ಹೆಸರು. ನಮ್ಮ ಮನೆ ಬಿಟ್ಟು ಮೂರು ಮನೆ ಆಚೆ ಇದಾರೆ, ಗಡಿಬಿಡಿ ಆಚಾರ್ರು ಅಂತ, ಅವರ ತಾಯಿ. ಕೈಲಿ ತಂಬಿಗೆ ಹಿಡಿದುಕೊಂಡು, ಅವರ ನೀರನ್ನು ಅಲ್ಲಲ್ಲಿ ತುಳುಕಿಸಿ, ನೀರು ಬಿದ್ದಕಡೆ ಮಾತ್ರ ಹೆಜ್ಜೆಯಿಟ್ಟೂರಿ ಬರುತ್ತಿ

ದಾರೆ ನೋಡಿ, ನೆಲಮೆಟ್ಟಿದರೂ ಮೆಟ್ಟದ ಹಾಗೆ. ಹಾಗೆ ನಡೆಯುವುದೂ ಒಂದು ಕಲೆ, ಎಲ್ಲರಿಂದಲೂ ಸಾಧ್ಯವಿಲ್ಲ...."

"ಗಡಿಬಿಡಿ ಆಚಾರ್ರು ಅಂತ ಅಂದಿರಲ್ಲ, ಏನು ಅವರ ಗಡಿಬಿಡಿವಿಚಾರ?"

"ಅಂಥ ಗಡಿಬಿಡಿ ಏನೂ ಇಲ್ಲ. ಸ್ವಲ್ಪ, ಸ್ವಲ್ಪ ಏನು, ಅತಿ ಆತುರದ ಮನುಷ್ಯ. ಪಾಪ, ಮೂರು ಮೈಲಿ ಆಚೆ ಇರುವ ಮುನಿಸಿಪಲ್ ಸ್ಕೂಲಿನಲ್ಲಿ ಮೇಷ್ಟ್ರು. ದಿನಕ್ಕೆ ಎರಡು ಸಲ ನಡೆದು ಹೋಗಬೇಕು, ನಡೆದು ಬರಬೇಕು. ಬರಬರನೆ ಹೋಗುವುದು, ಬಸಬಸನೆ ಬರುವುದು. ಎಲ್ಲ ಕೆಲಸಕ್ಕೂ ಈ ಆತುರ ಜಾಡ್ಯ ಅಂಟಿಕೊಂಡುಬಿಟ್ಟಿದೆ. ಪರೀಕ್ಷೆ ಮಾಡಿದಹಾಗೆ ನೋಡಿದ್ದೀನಿ ನಾನು. ಒಂದು ದಿನವಾದರೂ ಪೂರ್ತಿ ರುಮಾಲು ಸುತ್ತಿಕೊಂಡು ಹೊರಕ್ಕೆ ಬಂದಿಲ್ಲ ; ಸುತ್ತಿಕೊಳ್ಳುತ್ತಿರುವಾಗಲೇ ಹೊರಕ್ಕೆ ಬಂದುಬಿಟ್ಟಿರುತ್ತಾರೆ. ಆತುರದಲ್ಲಿ ಸುತ್ತು ವುದು. ಅದು ಬಿಚ್ಚುತ್ತಲೇ ಇರುತ್ತೆ. ಇವರು ಸುತ್ತಿಕೊಳ್ಳುತ್ತಲೇ ಇರುತ್ತಾರೆ. ಪೂಜೆ, ಊಟ, ಮಾತುಕತೆ ಎಲ್ಲದರಲ್ಲೂ ಇದೇ ಆತುರ, ಇದೇ ಗಡಿಬಿಡಿ. ಇಷ್ಟೇ ಹೊರತು, ನಮ್ಮ ಬೀದಿಯಲ್ಲಿ ಇವರಷ್ಟು ಸಾಧುವಾದ ಸದ್ಗೃಹಸ್ಥರು ಬೇರೆ ಯಾರೂ ಇಲ್ಲ ಎಂದೇ ಹೇಳಬೇಕು...."

"ಪಾಪ, ದಿನಕ್ಕೆ ಹನ್ನೆರಡು ಮೈಲಿಯನ್ನು ಬರಿಗಾಲಿನಲ್ಲಿಯೇ ನಡೆಯು ತ್ತಾರೆಯೇ ?"

"ನಮ್ಮ ಗುಮಾಸ್ತೆ ಗುಂಡಪ್ಪ ಒಂದು ಸಲ ಸಲಹೆ ಮಾಡಿದನಂತೆ, 'ಎಕ್ಕಡ ಹಾಕಿಕೊಂಡು ನಡೆಯಿರಿ, ಇಲ್ಲದಿದ್ದರೆ ಕಾಲು ಯಾತಕ್ಕಾದಾವು' ಅಂತ. ಪಾಪ, ಅವರು ಸ್ಪೆಷಲ್ಲಾಗಿ ಹೇಳಿಮಾಡಿಸಿದ ಎಮ್ಮೆ ಚರ್ಮದ ಎಕ್ಕಡವನ್ನೇ ಕೊಂಡರು ; ಅದಕ್ಕೆ ಪಂಚೇರು ಹರಳೆಣ್ಣೆ ಕುಡಿಸಿ, ಅದರ ಸೇವೆ ಮಾಡಿದರು ; ಆದರೂ ಅದರ ಕೈಲಿ ಕಚ್ಚಿಸಿಕೊಂಡರು. ಎರಡು ವಾರ ಅದರೊಂದಿಗೆ ಹೋರಾಡಿ ಅದನ್ನು ಪೂರ್ತಿ ಪಳಗಿಸಿಕೊಂಡ ಮೇಲೆ, ಇನ್ನೆರಡು ವಾರದಲ್ಲಿ ಅದು ಪೂರ್ತಿ ಸವೆದುಹೋಯಿತು ! ಹದಿನೆಂಟು ರೂಪಾಯಿ ಸಂಬಳದ ಸ್ಕೂಲು ಮೇಷ್ಟ್ರು ತಿಂಗಳಿಗೆ ಒಂದು ಜೊತೆ ಎಕ್ಕಡವನ್ನು ಎಲ್ಲಿಂದ ಕೊಂಡು ತಂದು ತಿರುಗಿಯಾರು ?"

"ಇದೇನು ? ಮಡಿಬಾಯಿ ಮತ್ತೆ ಹಿಂದಕ್ಕೆ ಓಡಿಬಂದು ಮನೆ ಹೊಕ್ಕು ಬಿಟ್ಟರು ?"

"ಇನ್ನೇನು ಮಾಡ್ತಾರೆ ಪಾಪ. ವೀಳ್ಯದೆಲೆಯ ಮಂಚಮ್ಮನನ್ನ ದೂರದಲ್ಲೇ ನೋಡಿಬಿಟ್ಟರು. ಅಕಸ್ಮಾತ್ ದೂರದಲ್ಲಿ ಕಂಡದ್ದಕ್ಕೆ ದೋಷವಿಲ್ಲ ಅಂತ ಮನೆಗೇ ಹಿಂದಿರುಗಿಬಿಟ್ಟರು...."

"ಅದು ಸರಿ, ಅವಳನ್ನ ನೋಡಿದರೆ ಇವರ ಮಡಿ ಹಾರಿಹೋಗುತ್ತೆಯೆ?"

"ಇದೇನು ಸ್ವಾಮಿ ಹೀಗಂತೀರ ? ಇವಳು ಹೊಲತಿ. ಈಗ ನಾವು ಜೀವಿಸುತ್ತಿರುವುದು ೨೦ನೆಯ ಶತಮಾನದ ಎರಡು ಮೂರನೆಯ ದಶಕಗಳಲ್ಲಿ ; ಅದನ್ನು ಮರೆಯಬೇಡಿ. ಮುಂದೆ ಈ ಹೊಲೆಯರ ಸ್ಥಿತಿ ಉತ್ತಮವಾಗಬಹುದು. ಅವರನ್ನ ಮೈಸೂರಲ್ಲಿ ಆದಿಕರ್ಣಾಟಕರು ಅಂತ ಬೇಕಾದರೆ ಕರೆಯಬಹುದು. ಅವರನ್ನ ಉದ್ಧಾರ ಮಾಡುವ ಮಹಾತ್ಮ ಆಗಲೇ ಹುಟ್ಟಿದಾನೆ ಅಂತ ಜನ ಹೇಳ್ತಾರೆ ; ಅವರಿಗೆ ಹರಿಜನ ಅಂತ ಹೆಸರಿಟ್ಟಿದ್ದಾನಂತೆ. ಮುಂದಿನ ಮಾತು ಇರಲಿ. ಇಂದು, ಈ ಬ್ರಾಹ್ಮಣರ ಕೇರಿಯಲ್ಲಿ, ಮಡಿಹೊತ್ತಿನಲ್ಲಿ, ಬಾ ಎಂದರೂ ಅವರೇ ಬರುವುದಿಲ್ಲ. ಆದರೆ, ನಮ್ಮ ಬೀದಿಯಲ್ಲಿ ಇವಳನ್ನ ಕಂಡರೆ ಎಲ್ಲರಿಗೂ ತುಂಬ ಪ್ರೀತಿ. ಹಾಲಿನ ಹನುಮಕ್ಕ, ಕಡಲೆಪುರಿಯ ಕೆಂಪಮ್ಮ, ಕಲಾಯಿ ಮಾಡುವ ಖಲಂದರ್‌ಸಾಬರು ಇವರ ಹಾಗೆ ಈ ಮಂಚಿ ನಮ್ಮ ಬೀದಿಯವಳಲ್ಲ ದಿದ್ದರೂ ಬೀದಿಯವರಲ್ಲಿ ಒಬ್ಬಳಾಗಿಬಿಟ್ಟಿದ್ದಾಳೆ. ವಾಡಿಕೆಯಾಗಿ ಇವಳು ಬರುವುದು ಸಂಜೆಯ ಹೊತ್ತಾದರೂ, ಅದು ಮಡಿಯ ಹೊತ್ತಲ್ಲ ನೋಡಿ, ಯಾರೋ ತುರುತಾಗಿ ಬರಹೇಳಿದ್ದಾರೆ ಅಂತ ಕಾಣುತ್ತೆ, ಯಾವುದೋ ಔಷಧದ ಸೊಪ್ಪಿಗಾಗಿ. ಯಾರೇನು, ನಮ್ಮ ಪಕ್ಕದ ಮನೆಯ ಔಷಧದ ಅಜ್ಜಮ್ಮನೇ ಇರಬೇಕು...."

"ಅಜ್ಜಮ್ಮ ಎಂದ ಮೇಲೆ ಮಡಿಹೆಂಗಸರು ಎನ್ನುವುದು ಸ್ವಯಂವೇದ್ಯ ಅಲ್ಲವೆ ?"

"ಅಂಥಾದ್ದೇನಿಲ್ಲ. ಬೆಳ್ಳಿಕೂದಲ ನಿಜವಾದ ಮುತ್ತೈದೆಯರೂ ಇದ್ದಾರೆ, ನಮ್ಮ ಬೀದಿಯಲ್ಲಿ. ಆದರೂ, ಇಪ್ಪತ್ತರಿಂದ ಹಿಡಿದು ಎಪ್ಪತ್ತರ ವಯ ಸ್ಸಿನವರೆಗೆ ಮಡಿಹೆಂಗಸರ ಒಂದು ಪಡೆಯೇ ಇದೆ ಎನ್ನಬಹುದು ನಮ್ಮ ಬೀದಿ ಯಲ್ಲಿ."

"ಇಪ್ಪತ್ತು ವಯಸ್ಸಿನ ಮಡಿಹೆಂಗಸೇ ?"

"ಅಲ್ಲ, ಅಲ್ಲ, ಮರೆತೆ. ತಪ್ಪಾಯಿತು, ಕ್ಷಮಿಸಬೇಕು. ಮಡಿಹುಡುಗಿ. ಗಂಡನ ಮನೆಗೆ ಕಾಲಿಡುವುದಕ್ಕೆ ಮೊದಲೇ, ಹದಿನೈದನೆಯ ವಯಸ್ಸಿನಲ್ಲೇ, ಕೆಂಪುಬಣ್ಣದ ಬಲಿವಸ್ತ್ರ ಧರಿಸಿದ ಕನ್ಯೆ....ಸಾಯುವವರೆಗೂ ಮದುವೆಯಾಗಿದ್ದೂ ಆಗಿಲ್ಲದ ಕನ್ಯೆ....ಸಮಾಜವೇನೋ ಅವಳ ಶೀಲರಕ್ಷಣೆಗೆಂದು ವಿಕಾರಮಾಡಿದೆ.... ಆದರೆ, ಕೆಂಪು ಮುಸುಕಿನ ಮರೆಯಲ್ಲೂ ಅವಳ ಮುಖದ ಚೆಲುವು 'ಹೋಗುವು ದಿಲ್ಲ' ಅಂತ ಹಟ ಹಿಡಿದು ಕುಳಿತಿದೆ....ಆ ಹುಡುಗಿಯ ಚಾಯಮಾನವೂ ವಿಚಿತ್ರವೇ. ತನಗೆ ಇಂಥ ದುರ್ಗತಿ ಬಂತಲ್ಲ ಎಂತ ಕೊಂಚವೂ ಕೊರಗಲಿಲ್ಲ.

ತಂದೆ, ತಾಯಿ, ಅಣ್ಣ ತಮ್ಮಂದಿರು ಇವರೆಲ್ಲರ ಸೇವೆ ಮಾಡಿಕೊಂಡು ಯಾವಾಗಲೂ ನಗುನಗುತ ಇರುತ್ತಾಳೆ...."

"ಅದೇ ಸರಿಯಾದ ಭಾವನೆ ಅಂತ ಕಾಣುತ್ತೆ, ಅವಳ ಪರಿಸ್ಥಿತಿಯಲ್ಲಿ. ಕೊರಗು ಚಿಂತೆ ಹಚ್ಚಿಸಿಕೊಂಡರೆ ಅವಳಿಗೂ ಸುಖವಿಲ್ಲ, ಮನೆಯವರಿಗೂ ಬೇಸರ ಹುಟ್ಟಬಹುದು."

"ಅಷ್ಟೇ ಅಲ್ಲ, ದಾರಿಯೂ ತಪ್ಪಬಹುದು...."

"ಹಾಗೇ ಅಂತೀರಾ !....ಮಡಿ ಹೆಂಗಸು ದಾರಿ ತಪ್ಪುವುದು ! ಅಚಿಂತ್ಯ, ಅಸಂಭವ, ಅಸಾಧ್ಯ !"

"ಅದರಲ್ಲೇನು ಆಶ್ಚರ್ಯ ಸ್ವಾಮಿ ?"

"ಅಲ್ಲ, ವಿಕಾರವಮಾಡಿಬಿಟ್ಟಿರುತ್ತಾರೆ ! ಅದು ಹೇಗೆ ಸಾಧ್ಯ ಅಂತೀನಿ ?"

"ನಮ್ಮ ಬೀದಿಯಲ್ಲೆ ಇನ್ನೊಬ್ಬಾಕೆ ಇದ್ದಳು. ನಮ್ಮ ಈ ಗೌರಿಗಿಂತ ಸ್ವಲ್ಪ ದೊಡ್ಡವಳು. ಇವಳಷ್ಟು ಚೆಲುವೆ ಅಲ್ಲ ; ಕುರೂಪಿಯೂ ಅಲ್ಲ. ಹರಿಕಥೆ ಹರಿಕಥೆ ಅಂತ ನಿತ್ಯ ರಾತ್ರಿ ಮನೆಬಿಟ್ಟು ಇತರ ಮಡಿ ಹೆಂಗಸರ ಜೊತೆಯೆ ಹೋಗುತ್ತ ಇದ್ದಳು. ಇದ್ದಕ್ಕಿದ್ದಹಾಗೆ ಕಣ್ಮರೆಯಾದಳು. ಯಾವುದೋ ನಾಟಕದ ಕಂಪೆನಿಯೋನ ಬಲೆಗೆ ಬಿದ್ದಿದ್ದಳು. ಆಮೇಲೆ, ಕೂದಲನ್ನೂ ಬೆಳೆಸಿಕೊಂಡು, ರಾಜಾರೋಷವಾಗಿ ಬೀದಿಯಲ್ಲೆಲ್ಲಾ ತಿರುಗಾಡತೊಡಗಿದಳು. ಈಗ ಅವಳಿಗೆ ಒಂದು ಹೆಣ್ಣು ಮಗುವೂ ಇದೆಯಂತೆ...."

"ಬಹು ವಿಚಿತ್ರವಾಗಿದೆ ಸ್ವಾಮಿ, ನಂಬುವುದಕ್ಕೇ ಆಗುವುದಿಲ್ಲ....ನೀವೂ ರಾಜಾರೋಷ ಅನ್ನುವ ಹೊತ್ತಿಗೆ ಸರಿಯಾಗಿ ಅಕೋ, ದೂರದಲ್ಲಿ ಬರುತ್ತಾ ಇದ್ದಾರಲ್ಲ, ಒಳ್ಳೇ ರಾಜಠೀವಿಯಿಂದ, ಅರಸಿನವರೋ ಹೇಗೆ ? ನೋಡಿದರೆ ರಾಜಮನೆತನದ ಅರಸಿನವರ ಹಾಗೆಯೇ ಕಾಣುತ್ತಾರೆ."

"ಅಯ್ಯೋ ಪಾಪ ! ನಮ್ಮ ಬೀದಿಯಲ್ಲಿರುವ ಅರಸಿನವರು ಹೆಸರಿಗೆ ಅರಸಿನವರು. ಹಳ್ಳಿಯಿಂದ ಬಂದವರು ; ರಾಗಿಮುದ್ದೆ ರಾಜರು...."

"ಹಾಗಾದರೆ ಯಾರೋ ಶ್ರೀಮಂತರು ಅಂತ ಕಾಣುತ್ತೆ ?"

"ನಮಗೆ ಹೋಲಿಸಿಕೊಂಡರೆ ಶ್ರೀಮಂತರು ಅನ್ನಬಹುದಾದವರು ಇದಾರೆಯೇ ಹೊರತು, ಈ ಸುದಾಮನ ಬೀದಿಯಲ್ಲಿ ಶ್ರೀಮಂತ ಅಂತ ಕರೆದುಕೊಳ್ಳುವ ಧೈರ್ಯ ಯಾರಿಗೆ ಇದ್ದೀತು ಸ್ವಾಮಿ ?"

"ಹಾಗಾದರೆ ಇವರು ಯಾರು ? ಶ್ರೀಮಂತರ ಹಾಗೆ ಕಾಣುತ್ತಾರೆಯಲ್ಲಾ ?"

"ಅರಮನೆ ಶಾಮರಾಯರು."

"ಅರಸಿನವರು ಅಲ್ಲ ಅಂದಿರಿ ? ಅರಮನೆಯಲ್ಲಿ ಭಾರಿ ಉದ್ಯೋಗದಲ್ಲಿ ದಾರೆ ಅಂತ ಕಾಣುತ್ತೆ, ಹಾಗಾದರೆ ?"

"ಅರ–ಮನೆ ಅಲ್ಲ, ಅರೆ–ಮನೆ. 'ಟೂರಿಂಗ್ ರಾಜ' ಅಂತ ಇವರಿಗೆ ಹೆಸರು ಕೊಟ್ಟಿದಾರೆ ನಮ್ಮ ಬೀದಿಯ ನಾಟಕದ ಸುಬ್ಬಣ್ಣ. ನಾಟಕದಲ್ಲಿ ರಾಜಾಪಾರ್ಟು ಮಾಡಿ ಮಾಡಿ ಜೀವನದಲ್ಲೂ ಹಾಗೆಯೇ ಇರಬೇಕು ಅಂತ ಹಂಬಲ ಅವರಿಗೆ. ಅರಮನೆಯಂತಹ ಮನೆ ಕಟ್ಟಬೇಕು ಅಂತ ಕೈಹಾಕಿ, ಅದು ಅರೆಮನೆಯಾಗಿ ಕುಳಿತಿದೆ. ನೋಡಿ ಅಲ್ಲಿ, ಮುಂದುಗಡೆ ಪಾಯ ಹಾಕಿ ಬಿಟ್ಟಿರೋದು, ಅದೇ, ಅವರು ಹತ್ತಾರುವರ್ಷಗಳಿಂದ ಎಬ್ಬಿಸಬೇಕು ಅಂತ ಇನ್ನಿಲ್ಲದ ಸಾಹಸಪಟ್ಟರೂ ಅರ್ಧಾಂತಕವಾಗಿ ಉಳಿದಿರುವ ಮನೆ...."

"ನಾಟಕದ ಸುಬ್ಬಣ್ಣ ಅಂದಿರಲ್ಲಾ, ಇವರ ಜೊತೇನೇ ಪಾರ್ಟು ಮಾಡ್ತಾರೋ ?"

"ಅವರೊಬ್ಬರು ವಿಚಿತ್ರ ವ್ಯಕ್ತಿ. ನಮ್ಮ ಬೀದಿಯ ವಿದೂಷಕ.... ನೋಡಿ, ನೆನೆದವರ ಮನದಲ್ಲಿ ಅಂದಹಾಗೆ ಅವರೇ ಈ ಕಡೆ ಬರ್‍ತಾ ಇದಾರೆ.... ಇವರಿಬ್ಬರೂ ಸಂಧಿಸಿದರೆ, ಕೂಡಲೇ ಒಂದು ನಾಟಕ ಪ್ರಾರಂಭವಾದ ಹಾಗೆಯೇ...."

"ಆಗಲಿ, ನೋಡೇಬಿಡೋಣ."

"ಮೂರೂ ಸೇರಿದರೆ ಪೂರ್ವಸುಕೃತ ಅನ್ನುವ ಹಾಗೆ, ನಮ್ಮ ಗುಮಾಸ್ತೆ ಗುಂಡಪ್ಪನೂ ಬರ್‍ತಾ ಇದಾನೆ, ಇವರ ಜೊತೆ ಸೇರಿಕೊಳ್ಳೋಕೆ. ಅವನ ಪಾತ್ರದಿಂದಲೇ ನಮ್ಮ ಬೀದಿಯ ನಾಟಕ ಮೊದಲಾಗುವುದು. ಬನ್ನಿ ಬನ್ನಿ, ಈ ನೇಪಥ್ಯದಲ್ಲಿ ನಾಟಕದ ಪೂರ್ಣ ಸ್ವರೂಪ ಕಾಣುವುದಿಲ್ಲ ; ಪ್ರೇಕ್ಷಕರ ಸ್ಥಳಕ್ಕೆ ಹೋಗೋಣ...."

"ಅಲ್ಲ, ನೀವೂ ಬಂದುಬಿಟ್ಟರೆ ಹೇಗೆ ? ನಿಮ್ಮ ಪಾತ್ರ ಯಾವುದೂ ಇಲ್ಲವೆ ?"

"ಇದೆ ಅಂದರೆ ಇದೆ, ಇಲ್ಲ ಅಂದರೆ ಇಲ್ಲ."

"ಹಾಗೆಂದರೆ ?"

"ನಾಟಕ ನೋಡಿ; ನಿಮಗೇ ಅರ್ಥವಾಗುತ್ತೆ."

"ಅದು ಸರಿ, ಬಿಟ್ಟಿ ನಾಟಕ ಅಂತ...."

"........ಕೆಟ್ಟಿರೋದಿಲ್ಲ."

(ಇಂತಿದು ಪ್ರವೇಶಕಂ)

# ಗುಮಾಸ್ತೆ ಗುಂಡಪ್ಪ

ಮಕ್ಕಳು ಹುಟ್ಟಿಹುಟ್ಟಿ ಸತ್ತುಹೋಗುತ್ತಿದ್ದು, ಹಡೆದಾಕೆಯ ಪುಣ್ಯದಿಂದ ಮಗು ಉಳಿದುಕೊಂಡರೆ, ಅದಕ್ಕೆ ಗುಂಡಪ್ಪ (ಹೆಣ್ಣಾದರೆ ಗುಂಡಮ್ಮ) ಎಂದು ಹೆಸರಿಡುವುದು ಕನ್ನಡನಾಡಿನ ದೊಡ್ಡಭಾಗವಾದ ಮೈಸೂರು ಸೀಮೆಯ* ವೈಶಿಷ್ಟ್ಯಗಳಲ್ಲೊಂದು! ಇಂಥ ಗುಂಡಪ್ಪ(ಮ್ಮ)ಗಳು ಎಷ್ಟೋ! ಅಗಣಿತ; ಆದಿಶೇಷನ ಎಣಿಕೆಗೂ ಅಸದಳ! ಹೀಗೆ ಹೆಸರು ಹೊತ್ತ ವ್ಯಕ್ತಿಗಳೆಲ್ಲ ನಿಜವಾಗಿಯೂ, ಹೆಸರಿಟ್ಟವರ ತಪಸ್ಸಿನ ಹಂಬಲನ್ನು ಹಣ್ಣಾಗಿಸಲೋಸುಗ ದೇವರ ಒಂದು ಅಂಶವೇ ಅವತಾರವಾಗಿದೆಯೋ ಎಂಬಂತೆ, ಕಲ್ಲುಗುಂಡಿನ ಹಾಗೆ ಗಟ್ಟಿಮುಟ್ಟಾಗಿ ದೀರ್ಘಾಯುಗಳಾಗಿ ಬದುಕಿದ್ದಾರಂತೆ, ಬದುಕುತ್ತಾರಂತೆ! ಇದು ನಮ್ಮ ಅಜ್ಜಿಯ ದೃಢನಂಬಿಕೆ ಮಾತ್ರವಲ್ಲ, ನಾಡಿನ ನಂಬಿಕೆಯೇ ಎಂದು ಘಂಟಾಘೋಷವಾಗಿ ಹೇಳಬಹುದು. ಹಾಗಿಲ್ಲದಿದ್ದ ಪಕ್ಷ, ನಾಡಿನ ತುಂಬ ಇಷ್ಟುಮಂದಿ ಗುಂಡಪ್ಪ(ಮ್ಮ)ಗಳು ಇರಲಿಕ್ಕಿಲ್ಲ. ಇದರಿಂದ ಇನ್ನೂ ಒಂದು ಸತ್ಯಾಂಶ ಹೊರಪಡುತ್ತದೆ: ನಮ್ಮ ಪ್ರಾಂತದಲ್ಲಿ ಶಿಶು ಮರಣ (Infant mortality) ಅಧಿಕವೆಂದು! ಅದನ್ನು ತಕ್ಕಮಟ್ಟಿಗೆ ತಡೆಗಟ್ಟಿರುವ ಒಂದೇ ದಿವ್ಯಯಂತ್ರವೆಂದರೆ ಈ ಒಂದು ಹೆಸರು: **ಗುಂಡಪ್ಪ.**

ಇಂಥ ದಿವ್ಯವಾದ ಹೆಸರನ್ನು ಹೊತ್ತಾತ ನಮ್ಮ ಗುಮಾಸ್ತೆ ಗುಂಡಪ್ಪ. ಆತನ ಹಿಂದೆ ಹನ್ನೆರಡು ಮಕ್ಕಳಾಗಿದ್ದುವಂತೆ ಆತನ ತಾಯಿಗೆ. ಎಲ್ಲವೂ ಅಕಾಲ ಮರಣ ಹೊಂದಿದ್ದುವಾದ್ದರಿಂದ, ಯಾರೋ ಪುಣ್ಯಾತ್ಮರ ಸಲಹೆಯಂತೆ ತಾಯಿತಂದೆ ಹದಿಮೂರನೆಯ ಮಗುವಿಗೆ ಈ ಅಮೃತನಾಮವನ್ನಿಟ್ಟರಂತೆ. ಇನ್ನು ಬೇರೆ ಯಾರುಯಾರೋ ಏನೇನೋ ಹರಕೆಗಳನ್ನು ಹೊರುವ ಹಾಗೆ ಸಲಹೆ ಕೊಟ್ಟರೂ ಕೇಳದೆ, ನಾಗ ಪ್ರತಿಷ್ಠೆ ಮಾಡಿರೆಂಬ ಸೂಚನೆಗಳನ್ನು ಮನ್ನಿಸದೆ, ಈ ಒಂದು ಹೆಸರಿನ ಮೈಮೆಗೆ ಮಾರುಹೋಗಿ ಅದನ್ನಿಟ್ಟರು ತಮ್ಮ ಪುತ್ರರತ್ನಕ್ಕೆ. ಮಗು ಬದುಕಿತು; ಅವರ ಪೂರ್ವ ಜನ್ಮದ ಪುಣ್ಯವೆಂಬಂತೆ. ಅವರ

* ಈ ಕಥೆ ಬರೆದ ಕಾಲಕ್ಕೆ ಕನ್ನಡನಾಡು ಇನ್ನೂ ಒಂದಾಗಿರಲಿಲ್ಲ.

ದುರದೃಷ್ಟ : ಅದಕ್ಕೆ ವರ್ಷ ತುಂಬುವುದರೊಳಗಾಗಿ ತಾಯಿ ತೀರಿಕೊಂಡರು ; ಚೂಡಾಕರ್ಮವಾಗುವುದಕ್ಕೆ ಮುಂಚೆಯೇ ತಂದೆಯೂ ಕಣ್ಮುಚ್ಚಿದರು. ಹೀಗೆ, ಬಹುಮಟ್ಟಿಗೆ ಹುಟ್ಟು ತಬ್ಬಲಿಯಾಗಿ ನಮ್ಮ ತಾತನವರ ಕುಟುಂಬಕ್ಕೆ ಕಾಲಿಟ್ಟಾಗ ಗುಂಡಪ್ಪನಿಗೆ ಐದು ವರ್ಷ ಇನ್ನೂ ತುಂಬಿರಲಿಲ್ಲ.

ನಮ್ಮ ತಾತನವರು ಬಹು ಉದಾರಿಗಳಂತೆ. ಅವರ ಉದಾರಾಶ್ರಯವನ್ನು ಅವರ ದೂರದ ಬಂಧು ಬಳಗದವರು, ಹೆಂಡತಿಯ ಕಡೆಯ ಸಂಬಂಧದವರು, ಇಷ್ಟ ಮಿತ್ರರೂ ಅನೇಕರು ಪಡೆಯುತ್ತಿದ್ದರು. ಒಂದು ಹೊತ್ತಿಗೆ ನೂರು ಎಲೆ ಹಾಕುತ್ತಿದ್ದರಂತೆ. ನಮ್ಮ ತಾತನವರಿಗೆ ಬರುತ್ತಿದ್ದ ಘನವಾದ ಸಂಬಳವೆಂದರೆ ತಿಂಗಳಿಗೆ ೧೨ ರೂಪಾಯಿ. ಅದು ಹೇಗೆ ಒಂದು ಅನ್ನ ಛತ್ರ ನಡಸುತ್ತಿದ್ದರೊ ತಿಳಿಯದ ಗುಟ್ಟಾಗಿದೆ. ಆ ಗುಟ್ಟು ತಿಳಿದಿದ್ದರೆ ಈಗಿನ ಕಾಲಕ್ಕೆ ಅನುಕೂಲವಾಗಿತ್ತು. ಇರಲಿ, ಈ ಮಹಾಛತ್ರದಲ್ಲಿ ಬಡತಬ್ಬಲಿ ಗುಂಡಪ್ಪನಿಗೆ ಎಡೆ ಸಿಕ್ಕಿದುದರಲ್ಲಿ ಆಶ್ಚರ್ಯವೇನಿಲ್ಲ. ಅವನ ಚೂಡಾಕರ್ಮ ಉಪನಯನಗಳೂ ವಿದ್ಯಾಭ್ಯಾಸವೂ ನಮ್ಮ ತಂದೆಯ ಜೊತೆಯಲ್ಲಿ ಸಾಂಗವಾಗಿ ನೆರವೇರಿದುವು. ಆತ ವಿದ್ಯಾಭ್ಯಾಸದಲ್ಲಿ ನಮ್ಮ ತಂದೆಗಿಂತ ಬಹುಮಟ್ಟಿಗೆ ಮುಂದುವರಿದನು ; ನಮ್ಮ ತಂದೆ, ಆಗತಾನೆ ಹೊಸದಾಗಿ ಪ್ರಾರಂಭವಾಗಿದ್ದ ಇಂಗ್ಲಿಷು ವಿದ್ಯಾಭ್ಯಾಸದ ೨-೩ ತರಗತಿಗಳು ಮುಗಿಸಿ, ಅಷ್ಟಕ್ಕೇ ಶರಣುಹೊಡೆದರು ; ಗುಂಡಪ್ಪ ಲೋವರ್ ಸೆಕಂಡರಿ ಪರೀಕ್ಷೆ ಮಾಡಿ, ಆಗಿನ ಕಾಲಕ್ಕೆ ತುಂಬ ವಿದ್ಯಾವಂತ ಎನ್ನಿಸಿಕೊಂಡ! ಆದರೆ ಗುಂಡಪ್ಪನ ಅದೃಷ್ಟ ಖೋಟಾ, ಆತನಿಗೆ 'ಛಾತಿ' ಇರಲಿಲ್ಲ ; ನಾನು ಕಂಡಹಾಗೇ ನಮ್ಮ ತಂದೆ ೨೦ ರೂಪಾಯಿನ ಗುಮಾಸ್ತೆಯಾಗಿದ್ದಾಗ ಗುಂಡಪ್ಪ ಇನ್ನೂ ೧೨ ರೂಪಾಯಿ ಪಡೆಯುತ್ತಿದ್ದನೆಂದರೆ ಆಶ್ಚರ್ಯವಲ್ಲವೆ ? ನಮ್ಮ ತಾತನವರೇ ಗುಂಡಪ್ಪನನ್ನೂ ನಮ್ಮ ತಂದೆಯವರನ್ನೂ ಒಂದೇ ಕಡೆ ಒಟ್ಟಿಗೆ ಕೆಲಸಕ್ಕೆ ಸೇರಿಸಿದ್ದರು. ಅಲ್ಲದೆ, ಕಚೇರಿಯ ಮೇಲಧಿಕಾರಿಗಳು ನಮ್ಮ ತಾತನ ಕೂಡ ಆಗಾಗ್ಗೆ 'ನಿಮ್ಮ ಗುಂಡಪ್ಪ ಬಹು ಬುದ್ಧಿವಂತ ; ಮುಂದಕ್ಕೆ ಬರುತ್ತಾನೆ ; ಆದರೆ ನಿಮ್ಮ ಮಕ್ಕಳು ಹೀಗೆ ಕೆಲಸಮಾಡಿಕೊಂಡು ಹೋದರೆ ಕೆಲಸ ಕಳೆದುಕೊಳ್ಳುತ್ತಾರೆ, ಅಷ್ಟೆ' ಎನ್ನುತ್ತಿದ್ದರಂತೆ. ಗುಂಡಪ್ಪ ವಿದ್ಯಾವಂತ ಎಂತ ಆತನನ್ನು ೬ ರೂಪಾಯಿಗಳ ಮೇಲೆ ಕೆಲಸಕ್ಕೆ ತೆಗೆದುಕೊಂಡಿದ್ದರು ; ಆದರೂ ೧೨ ರೂಪಾಯಿ ಆಗುವ ಹೊತ್ತಿಗೆ ಗುಂಡಪ್ಪನಿಗೆ ೧೨ ವರ್ಷ 'ಸರ್ವಿಸ್' ಆಗಿತ್ತು ; ೫ ರೂಪಾಯಿಗೆ ಸೇರಿದ ನಮ್ಮ ತಂದೆಗೆ ಅಷ್ಟರೊಳಗೆ ೨೦ ರೂಪಾಯಾಗಿತ್ತು. ನಾನು ಕೇಳಿದ್ದರಲ್ಲಿ, ಗುಂಡಪ್ಪ ಬುದ್ಧಿವಂತನಾಗಿದ್ದರೂ ಬರುಬರುತ್ತ ಸೋಮಾರಿಯಾಗಿ ಏನೂ ಕೆಲಸವನ್ನೆ ಮಾಡುತ್ತಿರಲಿಲ್ಲವಂತೆ.

ನಮ್ಮ ತಂದೆ, ಅಷ್ಟು ಬುದ್ಧಿವಂತರಲ್ಲದಿದ್ದರೂ, ತಮ್ಮ ಜವಾಬ್ದಾರಿ ಅರಿತು ಆಯಾ ಹೊತ್ತಿನ ಕೆಲಸವನ್ನು ಆಯಾ ಹೊತ್ತು ಮಾಡುತ್ತ ಬಂದದ್ದರಿಂದ ಮುಂದಕ್ಕೆ ಬಂದರಂತೆ.

ಗುಂಡಪ್ಪ ಜಡಸ್ವಭಾವದವನೆಂದು ಬೀದಿಗೆಬೀದಿಯೇ ಹೇಳುತ್ತಿತ್ತು. ಆತನ ವೇಷವನ್ನು ನೋಡಿದರೇ ಅದು ಎದ್ದು ಕಾಣುತ್ತಿತ್ತು ; ಕೊಳಕು ಅಂಗಿ ; ಕೊಳಕು ಪಂಚೆ, ಕೊಳಕು ರುಮಾಲು ; ಎಲ್ಲಾ ನಮ್ಮ ತಂದೆಯವರು ಹಳತೆಂದಾಗ ಗುಂಡಪ್ಪನ ಶರೀರವನ್ನಲಂಕರಿಸುತ್ತಿದ್ದುವು. ಗುಂಡಪ್ಪನ ರುಮಾಲು ಅನೇಕ ಕೆಲಸಗಳಿಗೆ ಬರುತ್ತಿತ್ತು : ಚಳಿಗೆ ಹೊದೆಯುವ ಉತ್ತರೀಯ ; ಹಾಗೇ ಪೇಟೆಗೆ ಹೋದರೆ, ತರಕಾರಿ ಮುಂತಾದ ಸಣ್ಣ ಪುಟ್ಟ ಸಾಮಾನು ತರುವುದಕ್ಕೆ ಚೌಕ ; ಕಚೇರಿಗೆ ರುಮಾಲು ; ನಮ್ಮ ಮನೆಯ ಹಸು ಎಲ್ಲಾದರೂ ತೊಂಡು ಬಿದ್ದು ಹೊರಟು ಹೋಗಿದ್ದರೆ ಅದನ್ನು ಕರೆತರುವುದಕ್ಕೆ ಹಗ್ಗ ; ರಾತ್ರಿ ಮಲಗಿದಾಗ ಹೊದೆಯುವ ಹಚ್ಚಡ. ಇಷ್ಟೆಲ್ಲಾ ಕೆಲಸಕ್ಕೆ ಬಂದರೂ, ನಮ್ಮ ತಂದೆ ಇನ್ನೊಂದು ಹಳೆಯ ರುಮಾಲು ದಾನಮಾಡುವವರೆಗೂ ಗಟ್ಟಿಯಾಗಿಯೇ ಇರುತ್ತಿತ್ತು ; ಬೇರ್ಪಡಲಾಗದಂತೆ ಅದಕ್ಕೆ ಅಂಟಿಕೊಂಡಿದ್ದ ಕೊಳೆಯೆ ಅದರ ಬಲ ಎಂಬಂತೆ ತೋರುತ್ತಿತ್ತು.

ಇಂಥ ಮನುಷ್ಯನನ್ನು ನೋಡಿದರೆ ಸೋಮಾರಿ ಎಂದು ಮಾತ್ರವಲ್ಲದೆ ಜಿಪುಣ ಎಂದೂ ಕರೆಯಬೇಕಾಗುತ್ತದೆ. ಹೆಂಡತಿಯಿರಲಿಲ್ಲ, ಮಕ್ಕಳಿರಲಿಲ್ಲ ; ಯಾರಿಗಾಗಿ ದುಡ್ಡು ಕೂಡಹಾಕುತ್ತಿದ್ದನೆಂಬುದನ್ನು ಯಾರೂ ಅರಿಯರು. ನಮ್ಮ ತಂದೆಗೂ ಒಂದು ಕಾಸೂ ಕೊಡುತ್ತಿರಲಿಲ್ಲ, ನಮ್ಮ ತಂದೆಯೂ ಕೇಳುತ್ತಿರಲಿಲ್ಲ. ನಮ್ಮ ತಂದೆ ದುಡ್ಡು ತೆಗೆದುಕೊಂಡು ಗುಂಡಪ್ಪನಿಗೆ ಹೊಟ್ಟೆಗೆ ಹಾಕುತ್ತಿದ್ದರೆಂಬ ಗುಸುಗುಸು ಅಲ್ಲಿ ಇಲ್ಲಿ ಕೇಳಿ ಬರುತ್ತಿತ್ತು. ಅದು ಸುಳ್ಳು ಎಂದರೆ ಯಾರೂ ನಂಬುತ್ತಿರಲಿಲ್ಲ. ಅದು ಹೇಗಾದರೂ ಇರಲಿ. ಗುಂಡಪ್ಪ ಸಂಪಾದಿಸಿದ ದುಡ್ಡನ್ನು ಏನು ಮಾಡುತ್ತಿದ್ದನೋ, ಯಾವ ಬ್ಯಾಂಕಿನಲ್ಲಿ ಇಡುತ್ತಿದ್ದನೋ ಯಾರೂ ಕಾಣರು. ಹಣ ಶೇಖರಿಸುತ್ತಿದ್ದನೆಂಬುದರಲ್ಲಿ ಯಾ- ಸಂದೇಹವೂ ಇರಲಿಲ್ಲ, ನಮ್ಮ ಮನೆಯಲ್ಲಿ ಹೊಟ್ಟೆಬಟ್ಟೆ ಕಳೆಯುತ್ತಿತ್ತು ; ಹೊಸದಾಗಿ ತಲೆದೋರಿದ್ದ ಹೋಟೆಲಿಗೆ ಹೋಗುವ ಅಭ್ಯಾಸವೂ ಇರಲಿಲ್ಲ; ನಮ್ಮ ಮನೆಯಲ್ಲಿ ಪುಷ್ಕಳವಾಗಿ ಕಾಫಿ ತಿಂಡಿ ಆಗುತಿತ್ತು. ಗುಂಡಪ್ಪನಿಗೆ ನಾಟಕದ ಹುಚ್ಚು, ಹರಿಕಥೆಯ ಹುಚ್ಚು, ಸಂಗೀತಗಳ ಹುಚ್ಚು, ತುಂಬಾ ಇತ್ತು; ಕೊನೆಯವೆರಡು ಹೇಗಿದ್ದರೂ ಬಿಟ್ಟಿ. ಮಹಾರಾಜರು ಕೇಳಿದ್ದರೂ ವೀಣೆ ನುಡಿಸುತ್ತಿದ್ದರೋ ಇಲ್ಲವೋ, ಗುಮಾಸ್ತೆ ಗುಂಡಪ್ಪ ಅವರ ಮನೆಗೆ ಹೋಗಿ ಕುಳಿತರೆ

ಸಾಕು, ಆತನಿಗಾಗಿ 'ಸ್ಪೆಷಲ್ ಕಚೇರಿ' ಮಾಡಿಬಿಡುತ್ತಿದ್ದರು ವೀಣೆ ಶೇಷಣ್ಣ ನವರು ; ನಾಟಕಶಿರೋಮಣಿ ವರದಾಚಾರ್ಯರು, ನಕಲಿ ಕೃಷ್ಣಮೂರ್ತಿ, ಲಕ್ಷ್ಮೀಪತಿ ಶಾಸ್ತ್ರಿಗಳು, ಪುಟ್ಟಾರಿ ಶಾಸ್ತ್ರಿಗಳು, ಇನ್ನೂ ಅನೇಕಮಂದಿ ಅಂದಿನ ರಂಗಭೂಮಿಯ ಅಗ್ರಗಣ್ಯರು ಗುಮಾಸ್ತೆ ಗುಂಡಪ್ಪನ ಬಾಲ್ಯಸ್ನೇಹಿತರೆಂದ ಮೇಲೆ ಗುಂಡಪ್ಪ ನಾಟಕಕ್ಕೆ ಕಾಸುಕೊಡಬೇಕಾಗಿತ್ತೆ ? ಇಂಥ ಮಿತ್ರವೃಂದ ವನ್ನು ಪಡೆದಿದ್ದ ಗುಮಾಸ್ತೆ ಗುಂಡಪ್ಪ ಮಹಾ ಭಾಗ್ಯಶಾಲಿಯೆಂದೇ ನನಗೆ ಈಗ ತೋರುತ್ತಿದೆ. ಗುಂಡಪ್ಪನ ತೊಡೆಯಮೇಲೆ ನಾನು ಬೆಳೆದೆ ; ಅದರ ಫಲವಾಗಿರಬೇಕು ನನ್ನಲ್ಲಿ ಅಲ್ಪಸ್ವಲ್ಪ ಕಲಾಭಿರುಚಿ ಬೆಳೆದು ಬಂದಿರುವುದು. ಯಾವುದಕ್ಕೆ ಈ ಪ್ರಸಕ್ತಿಯೆಂದರೆ, ಗುಂಡಪ್ಪ ಯಾವುದಕ್ಕೂ ಒಂದು ಕಾಸೂ ವೆಚ್ಚಮಾಡುತ್ತಿರಲಿಲ್ಲ ; ಐದೈದು ನಿಮಿಷಕ್ಕೆ ಒಬ್ಬೊಬ್ಬ ಗೆಳೆಯನ ಮುಂದೆ ಕೈನೀಡಿದ್ದರೂ ನಶ್ಯಕ್ಕೆ ಕೊರತೆಯಿಲ್ಲದಷ್ಟು ನಶ್ಯದ ಗೆಳೆಯರಿದ್ದರು ಗುಂಡಪ್ಪನಿಗೆ. ಆತ ಮಾಡುತ್ತಿದ್ದುದಾದರೂ ಹಾಗೆಯೇ. ಇನ್ನು ಗುಂಡಪ್ಪನಿಗೆ ಎಲ್ಲಿಯ ವೆಚ್ಚ?

ಹೀಗೆ, ಗುಂಡಪ್ಪನಿಗೆ ವೆಚ್ಚಕ್ಕೆ ಆವಶ್ಯಕತೆಯಿಲ್ಲದ್ದರಿಂದ, ಆತನ ಸಂಬಳ ದಲ್ಲಿ ಒಂದಂಶವನ್ನು ಪಡೆಯುವುದು ಅನ್ಯಾಯವಲ್ಲವೆಂದು ನಮ್ಮ ತಾಯಿಯ ವಾದ. ನಮ್ಮ ತಾಯಿ ಏನಾದರೂ ಸಾಮಾನು ತರಬೇಕೆಂದು ಹೇಳಿದಾಗ ನಮ್ಮ ತಂದೆ ದುಡ್ಡಿಲ್ಲವೆಂದು ಗೊಣಗಿದರೆ, "ಸಾಲಗೀಲ ಮಾಡಬೇಡಿ, ಸಾಮಾನು ತಂದು ಹಾಕುವಂತೆ ಗುಂಡಪ್ಪನಿಗೆ ಹೇಳಿ. ಯಾವಾಗಲೋ ಒಂದು ಸಲ ಮನೆಗೆ ಮೂರುಕಾಸಿನ ಸಾಮಾನು ತಂದು ಹಾಕಿಬಿಟ್ಟರೆ ಆತ ಕೂಡಿಟ್ಟ ಗಂಟು ಕರಗಿಹೋಗುತ್ತೆಯೇ ?" ಎಂದು ರೇಗುವರು. "ಗುಂಡಪ್ಪನು ಗಂಟುಮಾಡಿ ಯಾರಿಗೆ ಬಿಡಬೇಕಾಗಿದೆ ? ಹೆಂಡತಿಯೇ, ಮಕ್ಕಳೆ ? ಏನೋ ಸ್ವಲ್ಪ ದೊಡ್ಡ ಹೊಟ್ಟೆ. ಸ್ನೇಹಿತರ ಬಳಗ ಜಾಸ್ತಿ. ಮನುಷ್ಯ ಧಾರಾಳಿ. ಇನ್ನು ಗಂಟು ಹೇಗೆ ಕೂಡಿಟ್ಟಾನು ? ನಮಗೆ ತಾನೇ ಏನು ಕೊಟ್ಟಾನು ?" ಎಂದು ನಮ್ಮ ತಂದೆಯ ಸಮಾಧಾನೋಕ್ತಿ. ಇದರಿಂದ ನಮ್ಮ ತಾಯಿ ಮತ್ತಷ್ಟು ಕೆರಳುತ್ತಿದ್ದರೇ ಹೊರತು, ಸಮಾಧಾನಗೊಳ್ಳುತ್ತಿರಲಿಲ್ಲ. "ಮನುಷ್ಯ ಧಾರಾಳಿ ಎನ್ನುವುದು ಯಾವ ಯೋಚನೆಯೂ ಇಲ್ಲದೆ ಧಾರಾಳವಾಗಿ ನಮ್ಮ ಮನೆಯಲ್ಲಿ ತಿಂದು ಕೊಂಡಿರುವುದರಿಂದಲೇ ಗೊತ್ತಾಗುತ್ತೆ. ಆತನಿಗೆ ದೊಡ್ಡ ಹೊಟ್ಟೆ ಎನ್ನುವುದು ನನಗಿಂತ ನಿಮಗೆ ಗೊತ್ತೆ ?" ಎಂದು ನಮ್ಮ ತಾಯಿ ವ್ಯಂಗ್ಯವಾಗಿ ನುಡಿದು, "ಏನಾದರೂ ಮಾಡಿಕೊಳ್ಳಿ. ಗುಂಡಪ್ಪ ಬೆನ್ನಲ್ಲಿ ಬಿದ್ದ ತಮ್ಮನಿಗಿಂತ, ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಿಗಿಂತ ಹೆಚ್ಚಾಗಿಹೋಗಿದ್ದಾನೆ. ನಾನೇಕೆ

ನಾಲಗೆ ಹಿರಿದುಕೊಳ್ಳಲಿ," ಎಂದು ಬಿರುಗಾಳಿ ಬೀಸಿಬೀಸಿ ಶಾಂತವಾಗಿಬಿಡುವಂತೆ ತಮ್ಮ ಅಸಮಾಧಾನವನ್ನೆಲ್ಲ ತೋಡಿಕೊಂಡು ಸುಮ್ಮನಾಗಿಬಿಡುತ್ತಿದ್ದರು.

ನಮ್ಮ ತಾಯಿಯ ಮಾತುಗಳು ಕಟುವಾಗಿದ್ದುವೇ ಹೊರತು, ಅವರ ವಾದ ನ್ಯಾಯವಾಗಿಯೇ ಇತ್ತೆಂದು ಯಾರಿಗೂ ಅನ್ನಿಸದಿರದು. ಆಗ ತಾನೇ (೧೯೧೪-೧೮ರ) ಯುದ್ಧ ಮುಗಿದಿತ್ತು. ಸಂಸಾರವನ್ನು ತೂಗಿಸಿಕೊಂಡು ಹೋಗುವುದು ನಮ್ಮ ತಂದೆಗೆ ನಿಜವಾಗಿಯೂ ಬಹು ಕಷ್ಟವಾಗಿತ್ತು. ಈ ಸಂದರ್ಭದಲ್ಲಿ ಗುಂಡಪ್ಪ ತಾನಾಗಿ ಕೈಯೆತ್ತಿ ಒಂದು ಐದು ರೂಪಾಯಿ ಕೊಟ್ಟಿದ್ದರೆ ನಮ್ಮ ಸಂಸಾರಕ್ಕೆ ಎಷ್ಟೋ ಸಹಾಯವಾಗುತ್ತಿತ್ತು. ಗುಂಡಪ್ಪ ತಾನಾಗಿ ಕೊಡಲೊಲ್ಲ; ನಮ್ಮ ತಂದೆ ಕೇಳಲೊಲ್ಲರು. ನಮ್ಮ ತಾಯಿ ಎಂದಿನಂತೆ ಒಂದು ದಿನ ಗುಂಡಪ್ಪನ ಮೇಲೆ ರೇಗಿ ಮಾತಾಡಿದಾಗ ನಮ್ಮ ತಂದೆ ಖಂಡಿತವಾಗಿ ಹೇಳಿಬಿಟ್ಟರು: "ನೋಡು, ನೀನು ಹೀಗೆ ಮೂರುಹೊತ್ತೂ ಗುಂಡಪ್ಪನನ್ನು ಎತ್ತಿ ಆಡಬೇಡ. ನನ್ನ ಜೊತೆಯಲ್ಲಿ ಬೆಳೆದವನು ಗುಂಡಪ್ಪ. ದುಡ್ಡು ಕೊಡುತ್ತಿಲ್ಲ ಎಂದು ಅವನನ್ನು ಮನೆಬಿಟ್ಟು ಅಟ್ಟುವುದಕ್ಕಾಗುತ್ತೆಯೇ ? ಹಿಂದಿನ ಜನ್ಮದಲ್ಲಿ ಅವನ ಋಣ ತೆಗೆದಿದ್ದೆವು ಅಂತ ಕಾಣುತ್ತೆ, ಈಗ ತೀರಿಸುತ್ತಿದೇವೆ. ಹಾಗೆ ನೋಡಹೋದರೆ, ಅವನು ನಮಗೆ ಏನೂ ಕೊಡಬೇಕಾದ್ದಿಲ್ಲ. ನಾವೇ ಅವನಿಗೆ ಅನ್ನ ಹಾಕಿಯೂ ಏನಾದರೂ ಮೇಲೆ ದುಡ್ಡು ಕೊಡಬೇಕಾದೀತೇನೊ."

"ಬ್ರಾಹ್ಮಣನಿಗೆ ದಕ್ಷಿಣೆ ಎಂತ ಭಾವಿಸಿಕೊಂಡು ಎಷ್ಟು ಬೇಕಾದರೂ ಕೊಡಬಹುದು, ಅಷ್ಟೆ. ನಮ್ಮ ಮನೆಯಲ್ಲಿ ಯಾರೂ ಮಾಡದ ಕೆಲಸ ಗುಂಡಪ್ಪ ಅದೇನು ಮಾಡುತ್ತಾನೋ ನಾನು ಬೇರೆ ಕಾಣೆ," ಎಂದು ನಮ್ಮ ತಾಯಿ ಇನ್ನೂ ಗೊಣಗುಟ್ಟುವರು.

ನಿಜವಾಗಿಯೂ, ಯಾರೂ ಮಾಡದ ಕೆಲಸವೇನನ್ನೂ ಮಾಡುತ್ತಿರಲಿಲ್ಲ. ಗುಂಡಪ್ಪ. ಆದರೆ, ಎಲ್ಲರ ಕೆಲಸವನ್ನೂ ಮಾಡುತ್ತಿದ್ದ. ಗುಂಡಪ್ಪ ಪೇಟೆಯ ವ್ಯಾಪಾರದಲ್ಲಿ ಬುದ್ಧಿವಂತನಲ್ಲ, ಟೋಪಿ ಬೀಳತಕ್ಕವ ಎಂದು ನಮ್ಮ ತಂದೆಯೂ ಹೇಳುತ್ತಿದ್ದರು. ಆದರೂ, ನಮ್ಮ ತಂದೆಗೆ ಬಿಡುವಿಲ್ಲದೆ ಅವರ ಬದಲು ಗುಂಡಪ್ಪನೇ ವ್ಯಾಪಾರಕ್ಕಾಗಿ ಹೋಗಬೇಕಾಗಿ ಬಂದಾಗ ಒಟ್ಟಿನಲ್ಲಿ ನಮಗೇನೂ ನಷ್ಟವಾಗುತ್ತಿರಲಿಲ್ಲ; ಒಂದೊಂದು ವೇಳೆ ಲಾಭವೇ ಆಗುತ್ತಿತ್ತು. ಏಕೆಂದರೆ, ನಮ್ಮ ತಂದೆ ಬಡಗುಮಾಸ್ತರಾದರೂ ಯಾವ ಸಾಮಾನನ್ನೆ ಆಗಲಿ ಕೂಲಿಯವರಿಂದ ಹೊರಿಸಿಕೊಂಡು ಬರುವುದೇ ರೂಢಿ! ಗುಂಡಪ್ಪನಾದರೋ, ಐವತ್ತು ಸೇರು ಅಕ್ಕಿಯಾಗಲಿ, ಎರಡು ಮಣ ಹುಣಿಸೆ ಹಣ್ಣಾಗಲಿ, ನಾಲ್ಕು ಮಣ ಸೌದೆಯಾಗಲಿ, ರುಮಾಲನ್ನು ಸಿಂಬಿಮಾಡಿ ಹೊತ್ತು ತಂದೇ ಸಿದ್ಧ. ಡೊಳ್ಳುಹೊಟ್ಟೆ

ಗುಂಡಪ್ಪ ಅಷ್ಟು ತೂಕ ಹೇಗೆ ಹೊರುತ್ತಾನೆಂಬುದೇ ಬೀದಿಯವರಿಗೆಲ್ಲ ಆಶ್ಚರ್ಯ ವಾಗಿತ್ತು.

ನಮ್ಮ ಮನೆಯ ಹಸುವಿನ ಕೆಲಸ ಒಂದನ್ನು ಮಾತ್ರ ಗುಂಡಪ್ಪ ಸಂಪೂರ್ಣವಾಗಿ ನೋಡಿಕೊಂಡುಬಿಡುತ್ತಿದ್ದ. ಹಾಲು ಕರೆಯುವುದು ಒಂದು ಬಿಟ್ಟು, ನಮ್ಮ ಮನೆಯ ಗೋಸೇವೆಯ ಪುಣ್ಯವೆಲ್ಲ ಗುಂಡಪ್ಪನ ಪಾಲಿನದೇ ಆಗಿತ್ತು. ಬಹುಕಾಲದವರೆಗೆ, ಹಸುವನ್ನು ಹಿತ್ತಿಲಿನ ಒಂದು ಸಾಮಾನ್ಯ ಚಪ್ಪರದ ಕೆಳಗೆ ಕಟ್ಟಿಹಾಕುತ್ತಿದ್ದೆವು. ಒಂದು ಸಲ ಮುಂಗಾರಮಳೆಯಲ್ಲಿ, ಗಾಳಿಮಳೆಗೆ ತಡೆಯದೆ ಚಪ್ಪರ ಬಿದ್ದುಹೋಯಿತು. ಆಗ, ನಮ್ಮ ತಂದೆ ಎಷ್ಟು ಬೇಡವೆಂದರೂ ಕೇಳದೆ, ಇತರರಿಂದ ಮಾಡಗೊಡಿಸದೆ, ಗುಂಡಪ್ಪ ತಾನೇ ಖುದ್ದಾಗಿ ತಡಿಕೆಗೋಡೆಯ ಕೊಟ್ಟಿಗೆಯೊಂದನ್ನು ಕಟ್ಟಿಬಿಟ್ಟು, ಬೆಳಗ್ಗೆ ಹುಲ್ಲು ಹಾಕುವುದು, ಗಂಜಳ ಸೆಗಣಿ ಎತ್ತಿಹಾಕುವುದು, ಬಾನಿಯಲ್ಲಿನ ಹಳೆಯ ಕಲಗಚ್ಚನ್ನು ತೋಡಿಹಾಕುವುದು, ಸಂಜೆ ಹಸು ಬಂದಕೂಡಲೆ ಅದನ್ನು ಕಟ್ಟಿಹಾಕುವುದು, ಅದಕ್ಕೆ ಮಾಲೀಸುಮಾಡುವುದು, ಮುಂತಾದ ಕೆಲಸಗಳಲ್ಲಿ ಗುಂಡಪ್ಪ ತನ್ನ ಬಿಡುವು ಹೊತ್ತನ್ನೆಲ್ಲ ವಿನಿಯೋಗ ಮಾಡಿ ಕೊಟ್ಟಿಗೆಯಲ್ಲೆ ಕಾಲ ಕಳೆಯುತ್ತಿದ್ದ. ಯಾರು ಇನ್ನೊಬ್ಬರನ್ನು 'ಗುಂಡಪ್ಪ ಎಲ್ಲಿ' ಎಂದು ಕೇಳಿದರೂ 'ಕೊಟ್ಟಿಗೆಯಲ್ಲಿ' ಎಂದು ಉತ್ತರ ಕೊಡುವುದು ಸಾಮಾನ್ಯವಾಗಿತ್ತು. ನಮ್ಮ ತಾಯಿ 'ಹಸುವಿನ ಕೊಟ್ಟಿಗೆ' ಎನ್ನುವುದಕ್ಕೆ ಬದಲು 'ಗುಂಡಪ್ಪನ ಕೊಟ್ಟಿಗೆ' ಎನ್ನುತ್ತಿದ್ದುದುಂಟು.

ಗುಂಡಪ್ಪನ ದಿನಚರಿಯಲ್ಲಿ ಇನ್ನೊಂದು ಮುಖ್ಯ ಕಾರ್ಯವಿತ್ತು. ಅದೇನೆಂದರೆ, ಪ್ರತಿನಿತ್ಯ ಸಂಜೆ ನಮ್ಮ ತಂದೆಯ ಪಂಚೆ ಒಗೆದುಹಾಕುವುದು. ತನ್ನ ಬಟ್ಟೆಯನ್ನು ಹೊಲಸಾಗಿಟ್ಟುಕೊಂಡಿದ್ದ ಗುಂಡಪ್ಪ ತನ್ನ ಬಾಲ್ಯಸ್ನೇಹಿತನ ಬಟ್ಟೆಬರೆಯನ್ನು ಹಸನಾಗಿಡುವುದರಲ್ಲಿ ತುಂಬ ಶ್ರದ್ಧೆ ವಹಿಸುತ್ತಿದ್ದ. ಒಂದು ದಿನ ಅಡಿಗೆ ತಡವಾದಾಗ, ಎಲ್ಲರೂ ಊಟಕ್ಕೆ ಕುಳಿತಿದ್ದಾಗ ನಮ್ಮ ತಂದೆ ನಮ್ಮ ತಾಯನ್ನು ಆಕ್ಷೇಪಣೆ ಮಾಡಿದರು; ಹೊತ್ತಾಯಿತೆಂದು ಸ್ವಲ್ಪ ರೇಗಿ ದರು. ಅದಕ್ಕೆ ನಮ್ಮ ತಾಯಿ, 'ನಿಮಗಾದರೆ ಗುಂಡಪ್ಪ ಪಂಚೆ ಒಗೆದು ಕೊಡುತ್ತಾನೆ. ಅದಕ್ಕೇ ನಿಮಗೆ ಅವನನ್ನು ಕಂಡರೆ ಅಷ್ಟೊಂದು ಪ್ರೀತಿ. ನನಗೂ ಸೀರೆ ಒಗೆದುಕೊಡುವುದಕ್ಕೆ ಯಾರಾದರೂ ಇದ್ದರೆ ಹೊತ್ತಿಗೆ ಸರಿಯಾಗಿ ಅಡಿಗೆ ಮಾಡಬಹುದಾಗಿತ್ತು' ಎಂದು ಕೊಂಕುನುಡಿದು' ಗಂಡನಮೇಲಿನ ಕೋಪ ವನ್ನು ಗುಂಡಪ್ಪನಿಗೆ ಎರಡು ಸೌಟು ಸಾರು ಹೆಚ್ಚಾಗಿ ಸುರಿದು ತೀರಿಸಿಕೊಂಡರು.

ವಾಸ್ತವವಾಗಿ ನಮ್ಮ ತಾಯಿ ಸೀರೆ ಒಗೆದುಕೊಳ್ಳುತ್ತಿದ್ದದ್ದು ಊಟಸಾದ ಮೇಲೆಯೇ. ಗಂಡನ ಮೇಲೆ ಅಸಮಾಧಾನವಾದಾಗ, ಗುಂಡಪ್ಪನ ವಿಷಯ ಹೊಟ್ಟೆಯಲ್ಲಿ ಅಡಗಿದ್ದ ಅಸಮಾಧಾನವು ನಮ್ಮ ತಾಯಿಯ ಬಾಯಲ್ಲಿ ಅಸಂಬದ್ಧ ವಾದ ಮಾತನ್ನಾಡಿಸಿಬಿಟ್ಟಿತು. ಆ ಮಾತು ಕೇಳಿ ನಮ್ಮ ತಂದೆಗೆ ಅಸಮಾ ಧಾನವಾದರೂ ಗುಂಡಪ್ಪನಿಗೆ ಅಸಮಾಧಾನವಾಗಲಿಲ್ಲ. ಮಾರನೆಯ ದಿನ, ಗುಂಡಪ್ಪ ನಮ್ಮ ತಾಯಿಯ ಎರಡು ಸೀರೆ ಒಗೆದು, ಅದನ್ನು ಹೆಂಗಸರಿಡುವ ಹಾಗೆಯೇ ಸಿಂಬಿ ಸುತ್ತಿ ಒಗೆಯುವ ಕಲ್ಲ ಮೇಲೆ ಇಟ್ಟುಬಿಟ್ಟಿದ್ದ. ನಮ್ಮ ತಾಯಿ ಅದನ್ನು ಕಂಡು ಬೆರಗಾದರು, ಮರುಗಿದರು, ಕೊರಗಿದರು : "ಇದೇನು ಗುಂಡಪ್ಪ! ನಾನು ಕೋಪದಲ್ಲಿ ನಿನ್ನೆ ಏನೋ ಮಾತಾಡಿಬಿಟ್ಟರೆ ಹೀಗೆ ಮಾಡು ವುದೆ? ನಿನ್ನ ಕೈಲಿ ಸೀರೆ ಒಗೆಸಿಕೊಂಡ ಪಾಪ ಹೇಗೆ ಕಳೆದುಕೊಳ್ಳಲಪ್ಪ? ಅಯ್ಯೋ ದೇವರೆ!" ಎಂದು ಕಂಬನಿಯಿಟ್ಟರು. ಗುಂಡಪ್ಪ ಹೇಳಿದ : "ಸಾವಿ ತ್ರಮ್ಮಾ, ನೀನು ಇಂಥ ಅಲ್ಪ ವಿಚಾರಕ್ಕೆಲ್ಲ ಶೋಕಪಟ್ಟರೆ ಹೇಗೆ? ವೆಂಕಟ ರಮಣಯ್ಯ ನನಗಿಂತ ಮೂರು ತಿಂಗಳಿಗೆ ದೊಡ್ಡವನು. ನೀನು ನನ್ನ ಅತ್ತಿಗೆಯ ಸಮಾನ. ಅತ್ತಿಗೆಯಾದವಳು ತಾಯಿಗೆ ಸಮಾನ. ತಾಯಿಯ ಸೀರೆ ಒಗೆದರೆ ಮಗನಿಗೆ ಪುಣ್ಯವೇ ಹೊರತು ಪಾಪವಿಲ್ಲ, ಅವಮಾನ ಮೊದಲೇ ಇಲ್ಲ. ಮಗನ ಕೈಲಿ ಎಂಥ ಸೇವೆ ಮಾಡಿಸಿಕೊಂಡರೂ ತಾಯಿಗೆ ಪಾಪವೆಲ್ಲಿ ಬಂತು?" ಅಂದು ಜಡಭರತ ಗುಂಡಪ್ಪನ ಹೃದಯವೆಂತಹದು ಎಂಬುದನ್ನು ನಮ್ಮ ತಾಯಿ ಕಂಡುಕೊಂಡರೆಂದು ಕಾಣುತ್ತದೆ. ಅಂದಿನಿಂದ ಗುಂಡಪ್ಪನ ವಿಷಯದಲ್ಲಿ ನಮ್ಮ ತಾಯಿಯ ವರ್ತನೆ ತೀರ ಬದಲಾಯಿಸಿಹೋಯಿತು. ನಮ್ಮ ತಾಯಿ ಗುಂಡಪ್ಪನನ್ನು ಕಾಣುತ್ತಿದ್ದಷ್ಟು ಪ್ರೀತಿಯಿಂದ ಯಾವಾಕೆಯೂ ತನ್ನ ಸ್ವಂತ ಮೈದುನನನ್ನು ಕೂಡ ಕಂಡುಕೊಂಡಿರಲಾರಳು, ಮುಂದೆ ಕಾಣಲಾರಳು.

ಗುಂಡಪ್ಪ ನಮ್ಮ ಮನೆಯಲ್ಲಿ ತುಂಬ ನೆಮ್ಮದಿಯಿಂದಿದ್ದ. ತನಗೆ ಹೆಂಡತಿ ಮಕ್ಕಳು ಇಲ್ಲವಲ್ಲ, ತಾನೂ ಎಲ್ಲರಂತೆ ಸಂಸಾರಸ್ಥನಾಗಿ ಸುಖವಾಗಿಲ್ಲ ವಲ್ಲ ಎಂಬ ಕೊರತೆ ಆತನನ್ನು ಬಾಧಿಸುತ್ತಿದ್ದಂತೆ ಕಾಣಲಿಲ್ಲ. ಗುಂಡಪ್ಪನ ವಿಷಯದಲ್ಲಿ ನಮ್ಮ ತಾಯಿಯ ಮನಸ್ಸು ಬದಲಾಯಿಸಿದ ಮೇಲೆ, ಹೇಗಾದರೂ ಮಾಡಿ ಆತನನ್ನು ಮದುವೆಗೆ ಒಪ್ಪಿಸಿ ಅವನನ್ನು ಸಂಸಾರ ದಲ್ಲಿ ನಿಲ್ಲಿಸಬೇಕೆಂದು ಅವರು ಹಂಬಲಿಸಿದರು. ಆದರೆ ಅವರ ಹಂಬಲು ಹಣ್ಣಾಗ ಲಿಲ್ಲ. ಎಷ್ಟು ಬೋಧಿಸಿದರೂ ಗುಂಡಪ್ಪ ಕಿವಿಗೊಡದಾದ. ಯಾವ ವಾದ ಹೂಡಿದರೂ ಮಾತಾಡಿದವರ ಬಾಯಿ ಮುಚ್ಚಿಸಿಬಿಡುತ್ತಿದ್ದ.

"ಗುಂಡಪ್ಪ, ನಿನಗೇನು ಅಂಥ ವಯಸ್ಸಾಗಿಲ್ಲ, ನೀನು ಮನಸ್ಸು

ಮಾಡಿ ಒಪ್ಪಿದರೆ, ಹೆಣ್ಣು ನೋಡಿ ಗೊತ್ತುಮಾಡಿಕೊಡುವ ಭಾರ ನನಗಿರಲಿ" ಎಂದು ಸೂಚಿಸಿದರು ಒಮ್ಮೆ ನಮ್ಮ ತಾಯಿ.

"ಏನು ಸಾವಿತ್ರಮ್ಮ, ನೀನು ಹೇಳುವುದು! ನನಗೆ ಈಗ ಮದುವೆಯೆ? ನನಗೆ ವಯಸ್ಸಾಗಿಲ್ಲವೆ? ಇನ್ನು ಹತ್ತು ವರ್ಷವಾದರೆ ಪಿಂಚಿನ್ನಾಗುತ್ತೆ. ಆಗಲಾದರೂ ಮದುವೆಮಾಡಿಕೊಂಡರೆ ಮುಪ್ಪಿನಕಾಲಕ್ಕೆ ಮಡದಿ ಆದ ಹಾಗೆ ಆಗುತ್ತೆ! ಒಳ್ಳೆ ಮಾತು ಹೇಳಿದೆ, ಸಾವಿತ್ರಮ್ಮ" ಎಂದು ಗೊಳ್ಳನೆ ನಕ್ಕುಬಿಟ್ಟ ಗುಂಡಪ್ಪ.

"ಗುಂಡಪ್ಪ, ನಿನಗೆ ತಿಳಿಯದು. ಈಗೇನೋ ನೀನು ಗಟ್ಟಿಯಾಗಿದ್ದೀಯೇ. ಕೈಕಾಲು ಸೋತಾಗ ಕೈಹಿಡಿದ ಹೆಂಡತಿ ಉಪಚಾರ ಮಾಡುವ ಹಾಗೆ ಇತರರು ಮಾಡುತ್ತಾರೆಯೆ? ಅಲ್ಲದೆ, ಗತಿ ಕಾಣಿಸುವ ಮಗ ಒಬ್ಬ ಬೇಡವೆ?" ಎಂದು ನಮ್ಮ ತಂದೆಯೂ ನಮ್ಮ ತಾಯ ಮಾತನ್ನು ಪುಷ್ಟೀಕರಿಸಿದರು.

"ವೆಂಕಟರಾಮು, ನಾನು ಹೆಚ್ಚುಕಾಲ ಬದುಕಿರುವುದಿಲ್ಲ; ಬದುಕುವ ಇಚ್ಛೆಯೂ ಇಲ್ಲ. ಯಾಕೆ ಬದುಕಿರಬೇಕು? ಬದುಕಿರುವ ವರೆಗೇನೋ ನಾನು ಗಟ್ಟಿಮುಟ್ಟಾಗಿ ಗುಂಡುಕಲ್ಲಿನಹಾಗಿರುತ್ತೇನೆಂದು ತಿಳಿದಿದ್ದೇನೆ. ಇಷ್ಟರ ಮೇಲೆ ದೇವರ ಇಚ್ಛೆ. ಹಾಗೆ ಒಂದು ವೇಳೆ ನನ್ನ ಕೈಕಾಲು ಸೋತರೆ ನೀನಿಲ್ಲವೆ, ಸಾವಿತ್ರಮ್ಮ ಇಲ್ಲವೆ? ನಿಮ್ಮನ್ನ ನೋಡಿಕೊಂಡು ನಗುತ್ತ ಸಾಯುವುದು ಹೇಗಿದೆ, ಮದುವೆ ಮಾಡಿಕೊಂಡು ಹೆಂಡತಿ ಮಕ್ಕಳನ್ನು ನಡುನೀರಿನಲ್ಲಿ ಬಿಟ್ಟು ಅಳುತ್ತ ಸಾಯುವುದು ಹೇಗಿದೆ? ನನ್ನ ಮದುವೆಯ ಯೋಚನೆ ಮಾಡುವುದನ್ನು ಬಿಟ್ಟು ನಿಮ್ಮ ವೆಂಕಟಲಕ್ಷ್ಮಿಯ ಮದುವೆಯ ಯೋಚನೆ ಮಾಡಿ. ಅವಳಿಗಾಗಲೇ ಹನ್ನೆರಡಾಯಿತು. ಅವಳಕ್ಕನ ಪ್ರಸ್ತಕ್ಕೇನು ಯೋಚನೆ ಮಾಡಿದ್ದೀಯೆ? ರಾಮುವಿಗೆ (ನನಗೆ) ಹತ್ತಾಯಿತು; ಅವನಿಗೆ ಹದಿನಾರು ವರ್ಷಕ್ಕೆ ಮುಂಜಿ ಮಾಡುತ್ತೀಯೋ?"

ಗುಂಡಪ್ಪನ ಈ ಮಾತು ತಟ್ಟನೆ ನಮ್ಮ ತಂದೆಯ ಆಲೋಚನಾ ಲಹರಿಯನ್ನು ಬೇರೆಯ ಕಡೆಗೆ ತಿರುಗಿಸಿತು. "ಹೌದು, ಮಾಡಬೇಕು. ಎಲ್ಲವನ್ನೂ ಒಟ್ಟಿಗೆ ಮಾಡಿಬಿಡುವುದೆಂದು ಆಲೋಚಿಸುತ್ತಿದೇನೆ. ಈಗ ಸಾಮಾನೆಲ್ಲ ತಗ್ಗು. ಎಷ್ಟೇ ಬಡತನದಲ್ಲಿ ಮಾಡಿದರೂ ಎಲ್ಲ ಸೇರಿ ಸಾವಿರರೂಪಾಯಿಗಳಾದರೂ ಬೇಕು. ಸೀತಾಲಕ್ಷ್ಮಿಯ ಮದುವೆಗೆ ಮಾಡಿದ್ದ ೫೦೦ ರೂಪಾಯಿ ಸಾಲ ಹಾಗೇ ಉಂಡೆಯಾಗಿ ಕುಳಿತಿದೆ. ಈಗ ಒಂದು ವರ್ಷದಿಂದ ಅದಕ್ಕೆ ಬಡ್ಡಿ

ಕೂಡ ಕಟ್ಟಿಲ್ಲ" ಎಂದು ತಮ್ಮ ಆಲೋಚನೆ ನುಡಿದು ತಲೆಯ ಮೇಲೆ ಕೈ ಹೊತ್ತು ಕುಳಿತುಬಿಟ್ಟರು ನಮ್ಮ ತಂದೆ.

ನಮ್ಮ ತಂದೆಗಿಂತ ಗುಂಡಪ್ಪನ ಮೇಲೆ ಈ ಆಲೋಚನೆಯು ಕಾರ್ಮೋಡದ ಕತ್ತಲೆ ಕವಿಯಿತೆಂದು ತೋರುತ್ತದೆ. "೫೦೦ ರೂಪಾಯಿ ಸಾಲ; ಇನ್ನೂ ತೀರಿಲ್ಲ; ಒಂದು ವರ್ಷದಿಂದ ಬಡ್ಡಿ ಕಟ್ಟಿಲ್ಲ!" ಎಂಬ ನುಡಿಗಳು ಗುಂಡಪ್ಪನ ಬಾಯಿಂದ ತಾವಾಗಿ ಹೊರಬಿದ್ದುವು. "ನನಗೆ ಹೇಳಿದ್ದರೆ?" ಎಂದು ಗುಂಡಪ್ಪ ಪ್ರಶ್ನಿಸಿದ.

"ನಿನಗೆ ಹೇಳಿದ್ದರೆ ನೀನು ಏನು ಮಾಡುತ್ತಿದ್ದೆ ಎಂದು ನನಗೆ ಗೊತ್ತು. ಅದಕ್ಕೇ ನಿನಗೆ ಹೇಳಲಿಲ್ಲ."

"ಓಹೋ, ಹಾಗೋ" ಎಂದು ಗುಂಡಪ್ಪ ಸುಮ್ಮನಾದ.

ನಮ್ಮ ತಂದೆಗೆ ಅದೇ ಯೋಚನೆ ಬಲವಾಗಿಟ್ಟುಕೊಂಡಿತು, ದಿನದಿನಕ್ಕೆ ಕೃಶವಾಗುತ್ತ ಬಂದರು. ಈ ಮಧ್ಯೆ ಹೆಚ್ಚು ಯೋಚನೆಗೆ ಅವಕಾಶ ಕೊಡದಂತೆ ಅವರು 'ಇನ್‌ಫ್ಲೂಎನ್‌ಜಾ' ಕಾಯಿಲೆಯಿಂದ ಹಾಸಿಗೆ ಹಿಡಿದರು. ಅವರ ಹಿಂದೆಯೇ ಮನೆಯವರೆಲ್ಲ ಒಬ್ಬೊಬ್ಬರಾಗಿ ಹಾಸಿಗೆ ಹಿಡಿದೆವು. ದೇಶವನ್ನೆಲ್ಲ ಕಾಡುತ್ತಿದ್ದ ಆ ರೋಗಮಾರಿ ಕೇರಿಯನ್ನು ಹೊಕ್ಕಾಗ ನಮ್ಮ ಮನೆಯೊಂದನ್ನು ಹೇಗೆ ಬಿಟ್ಟು ಹೋದಾಳು? ಪ್ರತಿಯೊಂದು ಮನೆಯಲ್ಲೂ ಹೊರಗೆ ದುಡಿಯುವ ಮನೆಯ ಯಜಮಾನ, ಮನೆಯೊಳಗೆ ದುಡಿಯುವ ಮನೆಯಾಕೆ ಇಬ್ಬರೂ ಕೆಮ್ಮು ಜ್ವರದ ಹೊಸ ಕುತ್ತಕ್ಕೆ ಒಳಗಾಗಿರುವಾಗ ಸಂಸಾರದ ರಥ ನಡೆಯುವುದಾದರೂ ಹೇಗೆ? ಮುನಿಸಿಪಾಲಿಟಿಯವರೂ ಸರ್ಕಾರದವರೂ ಸೇರಿ ಮನೆ ಮನೆಗೂ ಗಂಜಿ ಸರಬರಾಯಿ ಮಾಡತೊಡಗಿದರು. ಪ್ರತಿಯೊಂದು ಮನೆಯೂ ಒಂದು ಆಸ್ಪತ್ರೆಯಾಗಿತ್ತು; ಸ್ಮಶಾನವೂ ಆಗಿತ್ತು: ಆಗ ಸಾವಿಲ್ಲದ ಮನೆಯೆಂದರೆ ಸಾವಿರಕ್ಕೊಂದು.

ಇಂಥ ಪರಿಸ್ಥಿತಿಯಲ್ಲಿ ಗುಂಡಪ್ಪ ಕಲ್ಲುಗುಂಡಿನ ಹಾಗಿದ್ದ, ನಮ್ಮೆಲ್ಲರ ಉಪಚಾರ ಆರೈಕೆಗಳ ಭಾರವನ್ನೆಲ್ಲ ಅವರನೊಬ್ಬನೇ ಹೊತ್ತು ನಿರ್ವಹಿಸುತ್ತಿದ್ದ. ಸಹಾಯಕ್ಕೆಂದು ಬೇರೆ ಊರಿಂದ ಕೂಡ ಯಾರನ್ನಾದರೂ ಕರೆಸುವ ಹಾಗಿರಲಿಲ್ಲ: ನಮಗೂ ಮನಸ್ಸು ಒಡಂಬಡುತ್ತಿರಲಿಲ್ಲ; ಬರುವವರಾದರೂ ಹೆದರುತ್ತಿದ್ದರು. ಆಗ ಗುಂಡಪ್ಪ ಹೆಣ್ಣಿಗೆ ಹೆಣ್ಣಾಗಿ ಗಂಡಿಗೆ ಗಂಡಾಗಿ ಮಾಡಿದ ಆರೈಕೆ ಉಪಚಾರ ಅಷ್ಟಿಷ್ಟಲ್ಲ; ಬೆಲೆ ಕಟ್ಟುವುದಕ್ಕಾಗದು.

ಎಲ್ಲರಿಗಿಂತ ಮೊದಲು ಗುಣಮುಖಕ್ಕೆ ಬಂದದ್ದು ನನಗೆ. ಆದರೆ ಅಷ್ಟು ಹೊತ್ತಿಗೆ ನಮ್ಮ ತಂದೆಯ ಸ್ಥಿತಿ ತುಂಬ ಹದಗೆಟ್ಟಿತ್ತು; ಕಾಯಿಲೆಯು

ಮೋನಿಯಕ್ಕೆ ತಿರುಗಿತ್ತು. ಒಂದು ದಿನ ಇದ್ದಕ್ಕಿದ್ದ ಹಾಗೆ ಅವರಿಗೆ ಸನ್ನಿ
ಯಾಗಿ ಹುಚ್ಚು ಹುಚ್ಚು ಮಾತಾಡತೊಡಗಿದರು. ಆ ಹುಚ್ಚುಮಾತಿನಲ್ಲೂ
ಳುಗಳ ಪ್ರಸ್ತ, ಮದುವೆ, ಮುಂಜಿ, ಸಾಲ—ಇದೇ ಪಲ್ಲವಿ. ಗುಂಡಪ್ಪ
ಅದನ್ನೆಲ್ಲಾ ಯೋಚನೆ ಮಾಡಬೇಡವೆಂದೂ, ಅದರ ಭಾರ ತನಗೆ ಇರಲೆಂದೂ
ಆಣೆಯಿಟ್ಟು ಹೇಳುತ್ತಿದ್ದ. ಏನು ಹೇಳಿದರೂ ನಮ್ಮ ತಂದೆ ಕೇಳಲೊಲ್ಲರು.
ಮಾತನಾಡಿ ಆಡಿಯೋ ಯಾವ ಕಾರಣಕ್ಕೋ, ಅವರ ದನಿಯುಡುಗಿತು.
ಗುಂಡಪ್ಪನನ್ನು ಬಳಿಗೆ ಕರೆದರು: "ನಾನು ಕಣ್ಣುಮುಚ್ಚಿದರೆ — ಅವಳು,
ಮಕ್ಕಳು ನಿನ್ನ ಕೈಲಿ" ಎಂದು ಹೇಳಿ ಅರೆಗಣ್ಣು ಮುಚ್ಚಿದರು. "ಗಂಗೆ
ತೆಗೆದುಕೊಂಡು ಬಾ" ಎಂದು ಗುಂಡಪ್ಪನಿಗೆ ಮೆಲ್ಲನೊರೆದರು. ನಮ್ಮ
ತಾಯಿ, ಅಕ್ಕಂದಿರು ಎಲ್ಲ ಹೇಗೋ ಹಾಸಿಗೆ ಬಿಟ್ಟಿದ್ದು, ನಮ್ಮ ತಂದೆಯ ಸುತ್ತ
ಕುಳಿತು, ಅಳತೊಡಗಿದರು. ಗುಂಡಪ್ಪ ಮಾತಾಡದೆ ದೇವರ ಕೋಣೆಗೆ ಹೋಗಿ
ಬಂದು, ನಮ್ಮ ತಂದೆಯ ಪಕ್ಕದಲ್ಲಿ ಕುಳಿತ. "ಗಂಗೆ ಎಲ್ಲಿ?" ಎನ್ನುವಂತೆ
ನಮ್ಮ ತಂದೆ ಸನ್ನೆಮಾಡಿದರು. "ದೇವರ ಮುಂದೆ ತುಪ್ಪದ ದೀಪ ಹೊತ್ತಿಸಿಟ್ಟಿ
ದ್ದೇನೆ, ದೇವರಿಗೆ ಪ್ರೀತಿಯಾಗುವ ಹಾಗೆ ದಾನಧರ್ಮ ಮಾಡುವ ಹರಕೆಹೊತ್ತಿ
ದ್ದೇನೆ. ನೀನು ಹೆದರಬೇಡ, ನಿನಗೆ ಆ ಗಂಗೆ ಏಕೆ? ನನ್ನ ಪ್ರಾಣಗಂಗೆಯನ್ನು
ನಿನಗೆ ಎರೆಯುತ್ತೇನೆ" ಎಂದು ಎರಡು ಕೈಗಳಿಂದಲೂ ನಮ್ಮ ತಂದೆಯ ಕೈ
ಹಿಡಿದುಕೊಂಡ. ಗುಂಡಪ್ಪನ ಬಾಷ್ಪವೇ ಗಂಗೆಯಂತೆ ನಮ್ಮ ತಂದೆಯ ಕೈ
ತೋಯಿಸಿತು.

ನಮ್ಮ ತಂದೆ ಉಳಿದುಕೊಂಡರು. ನನಗೆ, ನನ್ನ ಅಕ್ಕಂದಿರಿಗೆ ಸಂಪೂರ್ಣ
ಗುಣವಾಗಿತ್ತು. ನಮ್ಮ ತಾಯಿ ಆಗಲೇ ಅಡಿಗೆಮಾಡುವ ಮಟ್ಟಿಗೆ ಚೇತರಿಸಿ
ಕೊಂಡಿದ್ದರು. ಆದರೆ—ಆದರೆ—

—ಆದರೆ, ಈ ಹೊತ್ತಿಗೆ ಗುಂಡಪ್ಪ ಹಾಸಿಗೆ ಹಿಡಿದಿದ್ದ. ನಮ್ಮನ್ನೆಲ್ಲ
ಕಾಪಾಡಿದ್ದ ಗುಂಡಪ್ಪ ಹಾಸಿಗೆ ಹಿಡಿದು ನಮ್ಮ ತಂದೆ ಹಿಂದೆ ಇದ್ದ ಹೀನಸ್ಥಿತಿ
ಯಲ್ಲಿ ತಾನು ಇದ್ದ. ನಮ್ಮ ತಂದೆ ಗುಣಮುಖವಾಗಿದ್ದರೂ. ಎದ್ದು ಗುಂಡಪ್ಪನ
ಶುಶ್ರೂಷೆಮಾಡುವ ಸ್ಥಿತಿಯಲ್ಲಿರಲಿಲ್ಲ. ತನ್ನ ಪ್ರಾಣ ಉಳಿಸಿದ ಸ್ನೇಹಿತನ
ಸೇವೆಮಾಡುವ ಪುಣ್ಯ ತನಗಿಲ್ಲದೆ ಹೋಯಿತೇ ಎಂದು ನಮ್ಮ ತಂದೆ ಪೇಚಾಡು
ತ್ತಿದ್ದರು. ಗಂಡನ ಉಪಚಾರಮಾಡುವುದಕ್ಕೂ ಇಲ್ಲದೇ ಹೋಯಿತೇ ಎಂದು
ಹಲುಬುತ್ತ ಇದ್ದ ನಮ್ಮ ತಾಯಿ ಇಂದು, ತನ್ನ ಗಂಡನನ್ನು ಉಳಿಸಿಕೊಟ್ಟಿದ್ದ
ಗುಂಡಪ್ಪನ ಸೇವೆಯನ್ನು ಸಂತೋಷದಿಂದ ಮಾಡುತ್ತಿದ್ದರು. ಮಣಕುಹಿಡಿದಿದ್ದ
ಗುಂಡಪ್ಪನ ಬಟ್ಟೆಗಳು ಶುಭ್ರವಾಗತೊಡಗಿದವು; ಏನಾದರೂ ಬೇಕೆಂದು

ಹೇಳುವುದಕ್ಕೆ ಗುಂಡಪ್ಪನಿಗೆ ಅವಕಾಶವೇ ಇರಲಿಲ್ಲ. ಒಂದು ದಿನ ಗುಂಡಪ್ಪ ತುಂಬ ಸಂಕಟಪಟ್ಟ; ರಾತ್ರಿ ಹನ್ನೊಂದರ ಸಮಯ; 'ಏನು ಬೇಕು?' ಎಂದು ನಮ್ಮ ತಾಯಿ ಕೇಳಿದರು. "ನೀನು ಇಷ್ಟು ಪ್ರೀತಿಯಿಂದ ನನ್ನನ್ನ ತಾಯಿ ಹೇಗೋ ಹಾಗೆ ನೋಡಿಕೊಳ್ಳುತ್ತಿದ್ದೀಯಮ್ಮ. ಮದುವೆ ಮಾಡಿಕೋ ಅಂತ ನನ್ನ ಬಲವಂತ ಮಾಡಿದೆಯಲ್ಲೇ ತಾಯಿ! ನನಗೆ ಏನೂ ಬೇಡಾ ಅಮ್ಮ. ಸದ್ಯಕ್ಕೆ, ಗಂಗೆಥಾಲಿ ತಂದಿಟ್ಟುಕೊಂಡಿರಮ್ಮ. ಸರಿಹೊತ್ತಿನಲ್ಲಿ ಬಾಯಾರಿಕೆಯಾಗಬಹುದು, ಕುಡಿಸುವೆಯಂತೆ" ಎಂದು ಕೆಮ್ಮುತ್ತ ಕೆಮ್ಮುತ್ತ ಹೇಳಿದ. ನಮ್ಮ ತಾಯಿಗೆ ಗಾಬರಿಯಾಯಿತು. "ಬಾಯಾರಿಕೆಯಾದಾಗ ಕೇಳಿದರೆ ನೀರು ಕೊಡುತ್ತೇನೆ, ಸ್ವಲ್ಪ ನಿದ್ದೆಮಾಡಿದರೆ ಒಳ್ಳೆಯದು" ಎಂದು ನಮ್ಮ ತಾಯಿ ನುಡಿದರು. ಹೊತ್ತು ಬೇಗನೆ ಜಾರಿತು. ದೂರದ ಶ್ರೀಮಂತ ಅರಸರ ಮನೆಯ ಪಹರೆಯ ಸಿಪಾಯಿ ೧೨ ಗಂಟೆಯನ್ನು ಜಾಗಟೆಯಲ್ಲಿ ಬಾಜಿಸಿದ. ಗುಂಡಪ್ಪ "ಬಾಯಾರಿಕೆ, ಗಂಗೆ" ಎಂದ. ನಮ್ಮ ತಾಯಿಗೆ ಮುಂದಾಗುವ ಅಶುಭ ಖಚಿತವಾಗಿ ಸೂಚಿತವಾಯಿತೇನೋ, ಬದಲು ಮಾತಾಡದೆ ಹೋಗಿ ಗಂಗೆ ತಂದರು; ನಮ್ಮ ತಂದೆ ತಾಯಿ ಗುಂಡಪ್ಪನಿಗೆ ಸ್ವಲ್ಪ ಸ್ವಲ್ಪ ಗಂಗೆ ಕುಡಿಸಿದರು. ಕುಡಿಯುವುದರ ನಡುನಡುವೆ, "ಪ್ರಸ್ತ-ಮದುವೆ-ಮದುವೆ-ಮುಂಜಿ-ಮುಂಜಿ-ನಾನು, ನಾನು-ಸಾಲ....ಬೇಡ, ಗಂಜಳ, ಗಂಜಳ, ಗಂಜಳ...." ಎಂಬ ಮಾತುಗಳು ಗುಂಡಪ್ಪನ ಗೊರಗುಟ್ಟುವ ಗಂಟಲಿನಿಂದ ಕಡೆಯ ಸಲ ಹೊರಟವು.

* * * *

ಗುಂಡಪ್ಪನ ಸಂಬಂಧದ ದಿನಕರ್ಮಗಳನ್ನು ನಮ್ಮ ತಂದೆ ನೂರಾರು ರೂಪಾಯಿ ಮುಟ್ಟಿಸಿ ಮಾಡಿಸಿದರು. ವೈಕುಂಠ ಸಮಾರಾಧನೆಯ ದಿನ ಬ್ರಾಹ್ಮಣರೆದುರು ಗುಂಡಪ್ಪನ ಗುಣಗಳನ್ನು ನೆನೆದು ಕಣ್ಣೀರು ಹಾಕಿದರು. "ಸಾಯುವಾಗಲೂ ಗುಂಡಪ್ಪನಿಗೆ ಹಸುವಿನ ಯೋಚನೆಯೇ. ಗಂಜಳ, ಗಂಜಳ ಎನ್ನುತ್ತ ಪ್ರಾಣಬಿಟ್ಟ. ನಾವು ಇನ್ನೂ ಕೊಟ್ಟಿಗೆಯ ಕಡೆಗೆ ಸುಳಿದಿಲ್ಲ. ನಾಳೆ ಮೊದಲು ಹಸುವಿನ ಕೊಟ್ಟಿಗೆಯಲ್ಲಿ ಗಂಜಳ ಎತ್ತಿಹಾಕಿ, ಚೊಕ್ಕಟ ಮಾಡಬೇಕು. ಗುಂಡಪ್ಪ ನಿತ್ಯ ಆ ಕೆಲಸ ಮಾಡದೆ ಊಟಕ್ಕೇ ಏಳುತ್ತಿರಲಿಲ್ಲ...." ಎಂದು ಮುಂತಾಗಿ ಗುಂಡಪ್ಪನ ಗೋಸೇವೆಯನ್ನೇ ಅರ್ಧಗಂಟೆ ಕೊಂಡಾಡಿದರು.

ಮಾರನೆಯ ದಿನ ಬೆಳಗ್ಗೆ ಎದ್ದಕೂಡಲೆ ನಮ್ಮ ತಂದೆ ಕೊಟ್ಟಿಗೆಗೆ ಹೋದರು. ನಾನೂ ಸುಮ್ಮನೆ ಅವರನ್ನು ಹಿಂಬಾಲಿಸಿ ಹೋಗಿ ಹಸುವನ್ನು ತುರಿಸುತ್ತ ನಿಂತೆ. ನಮ್ಮ ತಂದೆ ಕರಟದಿಂದ ಗಂಜಳವನ್ನು ಎತ್ತಿ ಸುರಿಯಲು

ಮೊದಲು ಮಾಡಿದರು. ೧೦–೨೦ ದಿನಗಳಿಗಿಂದ ಹಳತಾಗಿ ಕೊಳೆತಿದ್ದರಿಂದ, ಕೊಟ್ಟಿಗೆಯೆಲ್ಲ ನಾತ ಸುತ್ತಿಕೊಂಡಿತ್ತು. "ಅಪ್ಪ, ಹಾಗೆ ಮಾಡಬೇಡ. ಮಡಕೆಯನ್ನೇ ಎತ್ತಿಕೊಂಡು ಹೋಗಿ ಹೊರಗೆ ಚೆಲ್ಲಿಬಿಡು. ಗುಂಡಪ್ಪ ಹಾಗೆ ಮಾಡ್ತಾ ಇದ್ದ" ಎಂದು ನಾನು ಸಲಹೆ ಕೊಟ್ಟೆ. ನಮ್ಮ ತಂದೆ ಮಡಕೆಯನ್ನು ಎತ್ತಹೋದರೆ ಬರಲಿಲ್ಲ, ಕಚ್ಚಿಕೊಂಡುಬಿಟ್ಟಿತ್ತು; ಬಲವನ್ನೆಲ್ಲಾ ಬಿಟ್ಟು ಎತ್ತಿದರು; ಮಡಕೆ ಬಂತು; ಇದ್ದಕ್ಕಿದ್ದ ಹಾಗೇ, "ಆ !" ಎಂದು ಬೆರಗುಬಡಿದು ಮಡಕೆ ಎತ್ತಿಹಾಕಿಬಿಟ್ಟರು. "ಏನಪ್ಪಾ ?" ಎಂದು ಗಾಬರಿ ಕುತೂಹಲಗಳಿಂದ ನಾನು ಕೇಳಿದೆ. "ಲೇ !" ಎಂದು ನಮ್ಮ ತಂದೆ ಕೂಗಿದರು. "ಏನೂ ಅಂದ್ರಿ!" ಎಂದು ನಮ್ಮ ತಾಯಿ ಗಾಬರಿಯಾಗಿ ಓಡಿಬಂದರು. ನಮ್ಮ ಅಕ್ಕಂದಿರೂ ತಾಯಿಯನ್ನು ಹಿಂಬಾಲಿಸಿದ್ದರು. "ನೋಡಿಲ್ಲಿ!" ಎಂದು ನಮ್ಮ ತಂದೆ ಗಂಜಳದ ಕುಳಿಯನ್ನು ನಮ್ಮ ತಾಯಿಗೆ ತೋರಿದರು. ನಾವೆಲ್ಲ ಬಗ್ಗಿ ನೋಡಿದೆವು. ಅದರಲ್ಲಿ ರೂಪಾಯಿ ತುಂಬಿತ್ತು ; ಎಲ್ಲ ಬೆಳ್ಳಿಯ ನಾಣ್ಯ! "ಇದೇನು ಅಂದ್ರೆ ಇದು, ಪರಮಾಶ್ಚರ್ಯ !" ಎಂದು ನಮ್ಮ ತಾಯಿ ಆಶ್ಚರ್ಯ ಸಂತೋಷಗಳೊಡನೆ ಕೇಳಿದರು. ನಮ್ಮ ತಂದೆಯ ಮುಖದಲ್ಲಿ ಆಶ್ಚರ್ಯದ ಮುದ್ರೆ ಅಳಿಸಿತ್ತು ; ಸಂತೋಷದ ಬದಲು ದುಗುಡ ಅಚ್ಚೊತ್ತಿತ್ತು.

"ಸಾಯುವಾಗ ಗುಂಡಪ್ಪ ಹೇಳಿದ ಅರ್ಥವಾಗದ ಮಾತುಗಳು ಈಗ ಅರ್ಥವಾದುವು ನೋಡು. ಮದುವೆ ಮುಂಜಿಗಳಿಗಾಗಿ ಸಾಲ ಮಾಡಬೇಡವೆಂದು ಬಯಸಿದ. ಅದಕ್ಕೆ ದಾನವಾಗಿ ಈ ನಿಧಿಯನ್ನು ಮುಡಿಪಿಟ್ಟಿದ್ದಾನೆ ಬಡಪ್ರಾಣಿ. ಗಂಜಳದ ಗುಣಿಯಲ್ಲಿ ಹಣ ಇದೆ ಎಂದು ಹೇಳುವಷ್ಟರಲ್ಲಿ ಉಸಿರು ನಿಂತು ಹೋಯಿತು ಪಾಪ. ನನ್ನ ತಮ್ಮನನ್ನು ಕಳೆದುಕೊಂಡ ಹಾಗಾಯಿತು" ಎಂದು ನಮ್ಮ ತಂದೆ ಗೋಳಿಟ್ಟರು.

ಗುಂಡಪ್ಪನ ಹೆಸರು ಹೇಳಿ ನಮ್ಮ ತಂದೆ ಮದುವೆ ಮುಂಜಿ ಮುಂತಾದ ಎಲ್ಲ ಕಾರ್ಯಗಳನ್ನೂ ಸಾಂಗವಾಗಿ—ಸಾಲ ಮಾಡದೆ—ನೆರವೇರಿಸಿದರು ; ಆದರೆ, ಗುಂಡಪ್ಪನಿಲ್ಲದೆ ಮದುವೆಮನೆ ಕೂಡ ಬಿಕೋ ಎನ್ನುತ್ತಿತ್ತು.

# ನಾಟಕದ ಸುಬ್ಬಣ್ಣ

ನಾನು ಮೈಸೂರು ಬಿಟ್ಟು ಹತ್ತು ಹದಿನೈದು ವರ್ಷಗಳ ಮೇಲಾದುವು. ಮೈಸೂರಿನಲ್ಲಿ ನಮ್ಮ ಮನೆ ಬ್ರಾಹ್ಮಣರ ಬೀಡೆನಿಸಿದ ಒಂದು ಅಗ್ರಹಾರದಲ್ಲಿ. ನನ್ನ ಜನನ ಶೈಶವ ಬಾಲ್ಯ ವಿದ್ಯಾರ್ಥಿ ದಶೆಗಳೆಲ್ಲ ಅಲ್ಲಿಯೇ ಕಳೆದುವು. ನಾನು ಹೊಟ್ಟೆಯಪಾಡಿಗಾಗಿ ಈ ಬೆಂಗಳೂರು ಮಹಾ ನಗರಕ್ಕೆ ಒಂದು ಜೀವನ ಸಂಗ್ರಾಮಕ್ಕೆ ನುಗ್ಗಿದ ಮೇಲೆ, ದಿನದಿನದ ದಂದುಗದ ಜೀವನದ ತೊಳಲಿಕೆಬಳಲಿಕೆಗಳಿಂದ ಬೇಸತ್ತಾಗ ನಗರದ ಯಾವುದಾದರೂ ಗೃಹವಸತಿ ದೂರವಾದ ನಿರ್ಜನ ಪ್ರದೇಶದಲ್ಲಿನ ಹುಲ್ಲು ಹಸಲೆಯನ್ನೋ ಪ್ರಕೃತಿ ನಿರ್ಮಿತವಾದ ಶಿಲಾ ಪೀಠವನ್ನೋ ವಿಶ್ರಾಂತಿಗಾಗಿ ಆಶ್ರಯಿಸುವುದು ನನ್ನ ವಾಡಿಕೆ ; ಇಲ್ಲವೆ, ನನ್ನ ಕೋಣೆಯಲ್ಲಿ ಸುತ್ತಿಡ ಹಾಸಿಗೆಯ ಸುರುಳಿಯನ್ನೊರಗಿಕೊಂಡು ಕಾಲುನೀಡಿ ಕಣ್ಣು ಮುಚ್ಚಿ ಅರೆನಿದ್ದೆ ಅರೆಯೆಚ್ಚರದ ಸ್ಥಿತಿಯಲ್ಲಿ ಕಾಲಕಳೆಯುವುದೂ ಉಂಟು. ಆ ವೇಳೆಯಲ್ಲಿ ಅಪ್ರಯತ್ನವಾಗಿ, ಅನಪೇಕ್ಷಿತವಾಗಿ, ನನ್ನ ಬಾಲ್ಯ ಯೌವನ ಜೀವನದ ಚಿತ್ರಗಳು ನನ್ನ ಮನೋರಂಗಭೂಮಿಯಲ್ಲಿ ನಾಟಕದ ದೃಶ್ಯಗಳಂತೆ ಜೀವವತ್ತಾಗಿ ಬೆಳಗಿ, ನನಗೆ ವಾಸ್ತವ ಜೀವನದಲ್ಲಿ ದುರ್ಲಭವಾದ ಒಂದು ಅಲೌಕಿಕಾನಂದವನ್ನು ಒದಗಿಸಿವೆ. ನಾಟಕೀಯವಾದ ಈ ನೆನಪಿನ ನೋಟಗಳಲ್ಲಿ ಸುಬ್ಬಣ್ಣನವರದ್ದು ಒಂದು ಮುಖ್ಯ ಪಾತ್ರ.

ಸುಬ್ಬಣ್ಣನವರು ಇಹಲೋಕ ಯಾತ್ರೆಯನ್ನು ಮುಗಿಸಿ ಹತ್ತು ಹನ್ನೆರಡು ವರ್ಷಗಳಾದುವು. ಅವರನ್ನು ನೆನೆದಾಗಲೆಲ್ಲ ಅವರು ಸಾಯುವ ಮುನ್ನ ಧರಿಸಿದ್ದ ಗಳಿತದೇಹದ ಸ್ವರೂಪ ಬಗೆಗಣ್ಣ ಮುಂದೆ ಬಂದು ನಿಲ್ಲುತ್ತದೆ. ಬಾಗಿದ ಬೆನ್ನು, ಎಲುಬು ಚಕ್ಕಳವಾಗಿದ್ದ ಕೈಕಾಲುಗಳು, ಸುಕ್ಕು ಮೈ, ಪಾರ್ಶ್ವ ವಾಯುವಿನ ಹೊಡೆತವನ್ನು ತಾನೇ ಆತುಕೊಂಡು ಕೆಲವು ಕಾಲದವರೆಗಾದರೂ ಅವರ ಪ್ರಾಣವನ್ನು ಉಳಿಸಿದ್ದಿರಬಹುದಾದ ಸೊಟ್ಟಗೈ, ಸುಟ್ಟ ಬದನೆಯಂತಾಗಿದ್ದ ಕೆನ್ನೆಗಳು, ಗುಳಿಬಿದ್ದ ಕಣ್ಣುಗಳು, ಕಟಾವುಮಾಡಿದ ಗದ್ದೆ ಮಡಿಯನ್ನು ನೆನಪಿಗೆ ತರುವ ನರೆತ ಗಡ್ಡ–ಮೀಸೆ–ತಲೆ ; ಕೈಲೊಂದು ಅವರ ದೇಹದಂತೆಯೇ

ವಕ್ರವಕ್ರವಾಗಿದ್ದ ಗಂಟುಗಂಟಾಗಿದ್ದ ದೊಣ್ಣೆ, ಸೊಂಟದಲ್ಲಿ ತಗಡಿನ ನಶ್ಯದ ಡಬ್ಬಿ, ಕಣ್ಣಿಗೊಂದು ಬೆಳ್ಳಿಯಕಟ್ಟಿನ ಕನ್ನಡಕ ; ಮುಂಡಿಯಮೇಲಕ್ಕೆ ಒಂದು ತುಂಡು ಪಂಚೆ, ಹೊದೆದಿದ್ದ ನುಸಿತಿಂದ ನಶ್ಯದ ಬಣ್ಣದ (ಯಾರೋ ದಾನಮಾಡಿದ್ದ) 'ಕಾಶ್ಮೀರದ ಶಾಲು'. ಇವರನ್ನು ಯಾರಿಗಾದರೂ 'ನಾಟಕದ ಸುಬ್ಬಣ್ಣ' ಎಂದು ಪರಿಚಯ ಮಾಡಿಕೊಟ್ಟಿದ್ದರೆ ಕೇಕೆಹಾಕಿ ನಕ್ಕುಬಿಡುತ್ತಿದ್ದರು. ಏಕೆಂದರೆ, ಜನ ಬಲ್ಲ ನಾಟಕದ ಸುಬ್ಬಣ್ಣ ಬೇರೆ : ಆತ, ಒಂದಾನೊಂದು ಕಾಲದಲ್ಲಿ ಪ್ರಖ್ಯಾತಿ ಗಳಿಸಿ ಜನಪ್ರಿಯವಾಗಿದ್ದ ಚಾಮುಂಡೇಶ್ವರೀ ನಾಟಕ ಕಂಪೆನಿಯ ಸಂಚಾಲಕರಾಗಿದ್ದವರು ; ಶ್ರೇಷ್ಠ ಅಭಿನಯದಿಂದಲ್ಲದಿದ್ದರೂ ಆಕಾರ ಮಾತ್ರ ದಿಂದ ಸ್ತ್ರೀ ಪಾತ್ರಧಾರಣಕ್ಕೆ ವಿಶೇಷ ಅರ್ಹತೆ ಪಡೆದಿದ್ದ ವ್ಯಕ್ತಿ ; ಆ ಕಾಲದಲ್ಲಿ ಬಹು ಜನಪ್ರಿಯವಾಗಿದ್ದ ಆ ಕಂಪೆನಿಯ 'ರಾಜಸೂಯ' ನಾಟಕದಲ್ಲಿ ಕೃಷ್ಣನ ಪಾತ್ರವನ್ನು ವಹಿಸಿ ಕೇವಲ ವೇಷಭೂಷಣ ರಂಜಿತವಾದ ರೂಪರಾಶಿಯಿಂದ ಸಕಲರ ಮನಸ್ಸನ್ನೂ ಸೂರೆಗೊಂಡಿದ್ದ 'ನಾಟಕದ ಕೃಷ್ಣ ಬೊಂಬೆ.' ಈ ಸುಬ್ಬಣ್ಣನನ್ನು ನಾಟಕದಲ್ಲೂ ಹೊರಗೂ ನೋಡಿದ್ದವರು ನಮ್ಮ ಸುಬ್ಬಣ್ಣನವ ರನ್ನು ಅವರ ಯೌವನ ದಶೆಯಲ್ಲೋ ಮಧ್ಯ ವಯಸ್ಸಿನಲ್ಲೋ ನೋಡಿದ್ದರೆ ನಗುತ್ತಿರಲಿಲ್ಲ. ನಮ್ಮ ಸುಬ್ಬಣ್ಣ ಕೃಷ್ಣನ ಪಾತ್ರವಲ್ಲ, ಮನ್ಮಥನ ಪಾತ್ರ ವಹಿಸುವುದಕ್ಕೂ ಅರ್ಹರಾಗಿದ್ದರು—ತಮ್ಮ ಸೌಂದರ್ಯ ಸಂಪತ್ತಿನ ನಿಮಿತ್ತ ದಿಂದ.

ಸುಬ್ಬಣ್ಣನವರಿಗೆ ಎಳೆವರೆಯದಲ್ಲಿ ನಾಟಕದ ಕಂಪೆನಿ ಸೇರಬೇಕೆಂಬ ಗೀಳು ಹಿಡಿಯಿತಂತೆ. ಆಗತಾನೆ ದಿವಂಗತ ವರದಾಚಾರ್ಯರ ನಾಟಕದ ಕಂಪೆನಿ ಪ್ರಾರಂಭವಾಗಿ ಜನಕ್ಕೆ ಹುಚ್ಚು ಹಿಡಿಸಿತ್ತು. ಸುರೂಪಿಯಾದ ಸುಬ್ಬಣ್ಣ ನವರಿಗೆ ನಾಟಕದ ಕಂಪೆನಿ ಸೇರಬೇಕೆಂಬ ಗೀಳು ಹಿಡಿದದ್ದರಲ್ಲಿ ಆಶ್ಚರ್ಯವೇನಿಲ್ಲ. ಮೊದಲಿನಿಂದಲೂ ಸುಬ್ಬಣ್ಣನವರದು ಹೆಣ್ಣಿನದೆನಿಸಬಹುದಾದ ಹಾವಭಾವ, ನಡೆ ನುಡಿ. ಮನೆಯಲ್ಲೂ ಹೊರಗೂ 'ಹೆಣ್ಣಿಗ'ನೆಂದೇ ಅವರನ್ನು ಕುರಿತ ಸಲಿಗೆಯ ಹಾಸ್ಯದ ಸಂಬೋಧನೆ. ಅವರು ಹಾಸ್ಯವನ್ನು ಹಾಸ್ಯವಾಗಿಯೇ ಗ್ರಹಿಸಿದ್ದರು. ಹಾಸ್ಯ ಮಾಡಿಸಿಕೊಂಡು ಹಾಸ್ಯಮಾಡುವುದು ಅವರ ಹುಟ್ಟುಗುಣ. ತಮ್ಮ ಹಾಸ್ಯದ ಪ್ರಕೃತಿಯನ್ನು ಅವರೊಮ್ಮೆ ಕಾರ್ಯತಃ ಪ್ರದರ್ಶಿಸಿ, 'ಹೆಣ್ಣಿಗ'ನಾಗಿ ದ್ದವರು ಹೆಣ್ಣಾಗಿ ನೆರೆಹೊರೆಯ ಹೆಂಗಳೆಯರನ್ನು ನಲಿಸಿದ್ದರು. ಅವರ ಪಕ್ಕದ ಮನೆಯಲ್ಲಿ ಆರತಿಯಕ್ಷತೆಯ ಪ್ರಸಂಗ. ಅವರು ಯಾರಿಗೂ ಅರಿಯದಂತೆ ತಮ್ಮ ಅರ್ಧಾಂಗಿಯ ಸೀರೆ ರವಿಕೆಗಳನ್ನು ಧರಿಸಿ, ನಿತ್ಯಕಾಲದಲ್ಲಿ ಧರಿಸದೆ ವಿಶೇಷ ಸಂದರ್ಭಗಳಿಗೆಂದು ಪೆಟ್ಟಿಗೆಯಲ್ಲಿರಿಸಿದ್ದ ಆಕೆಯ ಅಲ್ಪಾಭರಣಗಳನ್ನು ತೊಟ್ಟು,

ಹೂಮುಡಿದು, ಪಕ್ಕದ ಮನೆಗೆ ಹೋಗಿ ಪತ್ನೀರತ್ನದ ಪಕ್ಕದಲ್ಲಿಯೇ ಮಂಡಿಸಿದರು. (ಇಲ್ಲಿ ಒಂದು ವಿವರಣೆ ಅಗತ್ಯ: ಆ ವೇಳೆಗಾಗಲೇ ಸುಬ್ಬಣ್ಣನವರು ವಪನ ವಿಧಿಯನ್ನು ತ್ಯಜಿಸಿ, ನಾಟಕದ ಕಂಪೆನಿಯ ಸ್ತ್ರೀ ಪಾತ್ರಕ್ಕೆ ಅರ್ಹತೆ ಪಡೆಯಲೋಸುಗ ತಲೆತುಂಬ ಕೇಶರಾಶಿಯ ಸೌಭಾಗ್ಯವನ್ನು ಸಂಪಾದಿಸಿದ್ದರು. ಸ್ತ್ರೀ ಪಾತ್ರವನ್ನು ವಹಿಸುವ ಪುರುಷರೆಲ್ಲರೂ ಆ ಕಾಲದಲ್ಲಿ ಹಾಗೆ ಮಾಡುತ್ತಿದ್ದರು; ಟೋಫನ್ನಿನ ಕೃತಕಾಲಂಕಾರದ ಆಶ್ರಯ ಪಡೆಯುತ್ತಿರಲಿಲ್ಲ.) ತನಗಿಂತಲೂ ರೂಪವತಿಯಾದ, ಪರಿಚಯವಿಲ್ಲದ ಹೆಂಗಸೊಬ್ಬಳು ತನ್ನ ಪಕ್ಕದಲ್ಲಿ ಕುಳಿತದ್ದನ್ನು ಕಂಡು, (ಈರ್ಷ್ಯೆಯಿಂದಿರಬಹುದು) ಸುಬ್ಬಣ್ಣನವರ ಮಡದಿ ಸ್ವಲ್ಪ ದೂರಕ್ಕೆ ಸರಿದಳು. ಏನು ಕಾರಣದಿಂದಲೋ ಏನೋ, ತನ್ನ ಸೀರೆ ರವಿಕೆಗಳನ್ನು ಆಕೆ ಗಮನಿಸಲಿಲ್ಲವೆಂದು ಕಾಣುತ್ತದೆ. ಸುಬ್ಬಣ್ಣನವರೂ ಪಕ್ಕಕ್ಕೆ ಸರಿದು ಹೆಂಡತಿಯ ತೊಡೆಗೆ ತೊಡೆ ಸೋಕಿಸಿ ಕುಳಿತರು. ಅವರೀಗೇನು ಭೀತಿ? ತಮ್ಮ ಹೆಂಡತಿಯೇ ಅಲ್ಲವೆ? ವಿದ್ಯುದ್ದೀಪ ಬಳಕೆಯಲ್ಲಿಲ್ಲದ್ದ ಆ ಕಾಲದ ಎಣ್ಣೆಯ ದೀಪದ ಮಂದಪ್ರಕಾಶದಲ್ಲಿ ಹೆಣ್ಣುವೇಷದ ಸುಬ್ಬಣ್ಣನವರನ್ನು ಯಾರೂ ಗುರುತಿಸಲಾಗದೆ 'ಕರೆಯದೆ ಬಂದ ಮುತ್ತೈದೆ ಯಾರಿವಳು?' ಎಂಬ ಬೆರಗು ಮಾತ್ರ ಎಲ್ಲರನ್ನೂ ಆವರಿಸಿತ್ತು. ಎಲ್ಲರೂ ಇವರ ಕಡೆ ಕುತೂಹಲದ, ಈರ್ಷ್ಯೆಯ ನೋಟವನ್ನು ಬೀರುವವರೆ! ಹಸೆಗೆ ಕರೆಯುವ ಹಾಡು ಹೇಳುವ ಸೂಳು ಬಂದಿತು. ಒಬ್ಬೊಬ್ಬರಾಗಿ ಹಾಡು ಹೇಳಿ ಮುಗಿಸಿದರು. ಮನೆಯಾಕೆ ಸುಬ್ಬಣ್ಣನವರನ್ನು ಕುರಿತು "ನೀವು ಯಾರೋ ನಮಗೆ ಪರಿಚಯವಿಲ್ಲ. ರಂಗಮ್ಮನವರ ವಾರಗಿತ್ತಿಯೇ ನೀವು? ಅವರೂ ಯಾಕೋ ಬರಲಿಲ್ಲ. ಸಂಕೋಚ ಯಾಕೆ? ನೋಡಿದರೆ ಈಗಿನ ಕಾಲದವರ ಹಾಗೆ ಕಾಣುತ್ತೀರಿ. ಒಂದು ಈಗಿನ ಕಾಲದ ಹಾಡನ್ನೇ ಹೇಳಿ"—ಎಂದು ತುಂಬ ಬಲವಂತ ಮಾಡಿದರು. ಸುಬ್ಬಣ್ಣನವರಿಗೆ ಬರದ ಹಾಡಿಲ್ಲ. ಆದರೆ ಕಂಠಶ್ರೀ ಅವರನ್ನು ಒಲಿದು ಬಂದಿರಲಿಲ್ಲ. ಅವರು ಬಂದಿರುವುದು ಒಂದು ನಾಟಕ ಕಟ್ಟುವುದಕ್ಕೆ. ಬಾಯಿಬಿಟ್ಟರೆ ಬಣ್ಣ ಬಯಲಾದೀತೆಂದು ಅಭೇದ್ಯವಾದ ಮೌನಕವಚವನ್ನು ಧರಿಸಿದರು. ಅವರಿವರು ಕೇಳಿದ ಪ್ರಶ್ನೆಗಳಿಗೆಲ್ಲಾ ಲಜ್ಜೆಯನ್ನು ಬೀರುವ ತಲೆಯ ಕೊಂಕೇ ಉತ್ತರವಾಯಿತು. "ಪರವಾಯಿಲ್ಲ. ಒಂದು ಹಾಡು ಹೇಳಿ" ಎಂದು ಅವರ ಹೆಂಡತಿಯೂ ದನಿಗೂಡಿಸಿದರು. ಸುಬ್ಬಣ್ಣನವರು ಹೆಂಡತಿಯನ್ನು ಮೊಣಕೈಯಿಂದ ತಿವಿಯುವ ಸ್ವಾತಂತ್ರ್ಯ ವಹಿಸಿದರು. ಆಕೆ ಮುನಿದು, ಸೆರಗು ಸರಿಮಾಡಿಕೊಂಡು, ಆಕಡೆ ಮುಖಮಾಡಿಕೊಂಡರು. ಆ ಬಗೆಯ ಸ್ತ್ರೀ ವರ್ತನೆಯನ್ನು ತಾನು ಅನುಕರಿಸಬಲ್ಲೆನೆಂಬುದನ್ನು ತೋರಿಸಲೋ ಎಂಬಂತೆ ಸುಬ್ಬಣ್ಣನವರೂ ಅಭಿ

ನಯಿಸಿದರು. ಕೊನೆಗೆ ಸುಬ್ಬಣ್ಣನವರಿಗೂ ಬಾಗಿಸ ಸಂದಿತು. ಅವರ ಅಂದಿನ ಅಭಿನಯಕ್ಕೆ ಅದಕ್ಕಿಂತ ಹೆಚ್ಚಿನ ಉಡುಗೊರೆ ಇನ್ನೇನು ಬೇಕು ? ಕೃತಾರ್ಥಭಾವದಿಂದ ಸುಬ್ಬಣ್ಣನವರು ಹೆಂಡತಿಯನ್ನು ಹಿಂಬಾಲಿಸಿಯೇ ಮನೆಗೆ ಬಂದರು. ಸುಬ್ಬಣ್ಣನವರ ಹೆಂಡತಿ ಮನೆಯ ಬಾಗಿಲಿಗೆ ಬರುತ್ತಾರೆ, ಬಾಗಿಲಿಗೆ ಬೀಗಹಾಕಿದೆ! ಸೆರಗಿನ ಕೊನೆಯನ್ನು ಪರೀಕ್ಷಿಸಿದರು, ಉಡಿಯಲ್ಲಿ ತಡಕಿದರು, ಬೀಗದಕ್ಕೈ ಸಿಕ್ಕಲಿಲ್ಲ. ತಾವು ಬೀಗ ಹಾಕಿಕೊಳ್ಳಲಿಲ್ಲವೆಂಬುದು ನೆನಪಿಗೆ ಬಂದಿರಬೇಕು. "ಇನ್ನು ಎಷ್ಟು ಹೊತ್ತೋ ಇವರು ಮನೆಗೆ ಬರುವುದು" ಎಂದು ಗೊಣಗಿದರು. ಆ ಹೊತ್ತಿಗೆ ಸರಿಯಾಗಿ ಸುಬ್ಬಣ್ಣನವರು ಮುಂದೆ ಹೋಗಿ ಬೀಗ ತೆಗೆದು ಒಳಹೊಕ್ಕರು ; ಹೊತ್ತಿಸಿದ ದೀಪದ ಬೆಳಕಿನಲ್ಲಿ ಪಕ್ಕದ ಮನೆಯಲ್ಲಿ ಕಂಡಿದ್ದ ಹೆಂಗಸೆಂಬುದಷ್ಟು ಸುಬ್ಬಣ್ಣನವರ ಹೆಂಡತಿಗೆ ಅರಿವಾಯಿತು. ಆದರೆ, ತಮ್ಮ ಮನೆಯ ಬೀಗದ ಕೈ ಇವರ ಕೈಗೆ ಬಂದದ್ದು ಹೇಗೆ ? ತಮಗೆ ಗೊತ್ತಿಲ್ಲದ ಗಂಡನ ನಂಟಿತಿ ಯಾರಾದರೂ ಮನೆಗೆ ಬಂದಿದ್ದು, ಆಕೆಯ ವಶಕ್ಕೆ ಮನೆ ಬಿಟ್ಟು ಗಂಡ ಹೊರಕ್ಕೆ ಹೊರಟಿದ್ದರೋ ? ಇಲ್ಲವೆ, ಗಂಡನಿಗೆ ಗಂಟು ಬಿದ್ದಿದ್ದ ಹೆಂಗಸೋ ? ಎರಡನೆಯ ಬಗೆಯ ಹೆಂಗಸಾಗಿದ್ದರೆ, ಏನು ಧಾರ್ಷ್ಟ್ಯ ಈಕೆಯದು ? ಸುಬ್ಬಣ್ಣನವರ ಹೆಂಡತಿ "ನೀವು ಯಾರು ?" ಎಂದು ಪ್ರಶ್ನಿಸಿದರು, ನುತ್ತೆ ಉತ್ತರವಿಲ್ಲ. "ಕುಳಿತುಕೊಳ್ಳಿ. ಮನೆಗೆ ಬಂದ ಮುತ್ತೈದೆ ಹಾಗೇ ಹೋಗುವುದೇ ? ಕುಂಕುಮ ಕೊಡುತ್ತೇನೆ" ಎಂದು ದಡದಡನೆ ಒಳಕ್ಕೆ ಹೋಗಿ ಕುಂಕುಮ ತಂದು ನೀಡಿದರು. ಅವರ ನಡೆನುಡಿಯಲ್ಲಿ ಕೋಪ ತುಂಬಿ ತುಳುಕುತ್ತಿತ್ತು. ಸುಬ್ಬಣ್ಣನವರು ಕುಂಕುಮ ತೆಗೆದುಕೊಂಡರು. ಆದರೆ, ತಾವು ಇಟ್ಟುಕೊಳ್ಳದೆ, ತಟ್ಟನೆ ತಮ್ಮ ಹೆಂಡತಿಯ ಹಣೆಗಿಟ್ಟರು. ಸುಬ್ಬಣ್ಣನವರ ಹೆಂಡತಿಗೆ ದಿಗ್ಭ್ರಮೆಯಾದಂತಾಗಿ ಕುಂಕುಮದ ಭರಣಿಯನ್ನು ಕೆಡವಿಬಿಟ್ಟರು. ಅವರು ಅಯ್ಯೋ ಎಂದು ಚೀರಬೇಕು ; ಅಷ್ಟರಲ್ಲಿ ಸುಬ್ಬಣ್ಣನವರು ತಮ್ಮ ನಿಜಸ್ವರೂಪವನ್ನು ಬಹು ರಸವತ್ತಾದ ನಾಟಕೀಯವಾದ ಮುಗಿತಾಯದಲ್ಲಿ ತಮ್ಮ ಹೆಂಡತಿಗೆ ಮನಗಾಣಿಸಿದರು. ಆ ಮುಗಿತಾಯದ ಪರಿಯನ್ನು ಸುಬ್ಬಣ್ಣನವರು ನನಗೂ ಬಿಡಿಸಿ ಹೇಳಿಲ್ಲ. ನಾನಾದರೂ ಹೇಗೆ ಬಿಡಿಸಿ ಹೇಳಲಿ ? ಊಹೆಗೆ ಬಿಡುವುದೇ ಮೇಲಲ್ಲವೇ ?

ಜೀವನ ನಾಟಕದಲ್ಲಿ ಇಷ್ಟು ಯಶಸ್ವಿಯಾಗಿ ಪಾತ್ರ ಕಟ್ಟಿದ ಸುಬ್ಬಣ್ಣನವರಿಗೆ ನಾಟಕ ಪ್ರಪಂಚದಲ್ಲಿ ಸ್ಥಾನ ಸಿಕ್ಕದಿದ್ದುದು ಅವರ ದುರ್ದೈವವೇ ಸರಿ. ಅಂದು ನಾಟಕ ಪ್ರಪಂಚದಲ್ಲಿ ಸಂಗೀತಕ್ಕೆ ಪ್ರಮುಖಸ್ಥಾನವಿದ್ದುದೇ ಸುಬ್ಬಣ್ಣನವರ ದುರ್ದೈವವಾಗಿ ಪರಿಣಮಿಸಿತು. ವರದಾಚಾರ್ಯರೇನೋ ತುಂಬಾ ವಿವೇಕಿ

ಗಳು. ಸಂಗೀತ ಬಾರದ ಅನೇಕ ಸಮರ್ಥರಾದ ನಟರಿಗೆ ಆಶ್ರಯವಿತ್ತು, ಉಚಿತಪಾತ್ರ ವಿತರಣೆಯಿಂದ ಅವರ ನಟನ ಕೌಶಲವನ್ನು ಹೊರಗೆಡಹಿ, ನಿಜವಾದ ಅಭಿನಯ ಕಲೆಗೆ ಪ್ರೋತ್ಸಾಹ ಕೊಡುತ್ತಿದ್ದರು. ಅವರಿಂದೀಚೆಗೆ ಹುಟ್ಟಿದ ಕಂಪೆನಿಗಳಲ್ಲಿ ಸಂಗೀತಕ್ಕೆ ಅಥವಾ ಸಂಗೀತಕ್ಕಿಂತ ಹೆಚ್ಚಾಗಿ ನಾಟಕದ 'ಮಟ್ಟು'ಗಳನ್ನು ಹಾಡುವ ಕಲೆಗೆ ಪ್ರಾಧಾನ್ಯ ದೊರೆತು ನಿಜವಾದ ಅಭಿನಯ, ರಂಗಭೂಮಿಯಿಂದ ನಿಷ್ಕ್ರಮಿಸತೊಡಗಿತು. ಮೊದಲೇ ಹೇಳಿದಂತೆ, ಸುಬ್ಬಣ್ಣನವರಿಗೆ ಕಂಠಶ್ರೀ ಒಲಿದಿರಲಿಲ್ಲ. ಸುಬ್ಬಣ್ಣನವರು ವರದಾಚಾರ್ಯರನ್ನು ಭೇಟಿಮಾಡಿ ಕಂಪೆನಿಗೆ ಸೇರಿಸಿಕೊಳ್ಳಬೇಕೆಂದು ಬೇಡಿದರು. ಸುಬ್ಬಣ್ಣನವರು ಒಂದು ಪರೀಕ್ಷೆಗೆ ಒಳಗಾಗಬೇಕಾಯಿತು. "ನೀನು ಯಾವ ಪಾರ್ಟು ಮಾಡ ಬಲ್ಲೆ ?" ಎಂದು ಕೇಳಿದರು ಆಚಾರ್ಯರು. "ನಿಮ್ಮ ಕೃಪೆಯಾದರೆ ರಾಣಿ ಪಾರ್ಟು ಮಾಡಬೇಕೆಂಬ ಅಭಿಲಾಷೆ" ಎಂದು ವಿನಯದಿಂದ ಹೇಳಿದರು ಸುಬ್ಬಣ್ಣನವರು. 'ಹಾಡುವುದಕ್ಕೆ ಬರುತ್ತದೆಯೋ ?' ಎಂದು ಕೇಳಿದಾಗ, ಬರುತ್ತದೆ, "ಆದರೆ....ಕಂಠ...." ಎಂದು ಸುಬ್ಬಣ್ಣನವರು ಶಂಕೆಯನ್ನು ವ್ಯಕ್ತ ಪಡಿಸಿದರು.

"ಹಾಡಿದರೆ ಕಂಠ, ತೋಡಿದರೆ ಬಾವಿ. ಹಾಡು, ಪರವಾಯಿಲ್ಲ" ಎಂದು ಪ್ರೋತ್ಸಾಹವಿತ್ತರು ಆಚಾರ್ಯರು. ಸುಬ್ಬಣ್ಣನವರು ಗತ್ತಿನಿಂದ ಎರಡು ಹಾಡುಗಳನ್ನು ಅಂದರು. "ಒಳ್ಳೆ ಗತ್ತಿನಿಂದ ಹಾಡುತ್ತೀಯೆ. ರಾಕ್ಷಸನ ಪಾರ್ಟುಮಾಡು" ಎಂದರು ಆಚಾರ್ಯರು. ರಾಣಿಪಾರ್ಟು ಕೇಳಿದರೆ ರಾಕ್ಷಸನ ಪಾರ್ಟು ಬಂತಲ್ಲ ಎಂದು ಸುಬ್ಬಣ್ಣನವರಿಗೆ ಖೇದವಾಗಿ ಮೌನದಿಂದಿದ್ದರು. ಯಾರೋ ಅಭ್ಯಾಗತರು ಬಡಿಸುವ ಮನೆಯಾಕೆಯನ್ನು "ಚಟ್ನೀಪುಡಿ ಇದೆಯೇ?" ಎಂದು ಕೇಳಿದ್ದಕ್ಕೆ ಆಕೆ "ಮೆಣಸಿನಪುಡಿ ಇದೆ" ಎಂದರಂತೆ; ಹಾಗಾಯಿತು. ಬಂದವರನ್ನು ನಿರುತ್ಸಾಹಗೊಳಿಸುವುದು ಆಚಾರ್ಯರ ಜಾಯಮಾನವಲ್ಲ. ಖೇದ ಗೊಂಡ ಸುಬ್ಬಣ್ಣನವರನ್ನು ಕುರಿತು—"ಸಖೀ ಪಾರ್ಟು ಮಾಡುತ್ತೀರು. ನಿನ್ನ ರೂಪ ಚೆನ್ನಾಗಿದೆ. ಮುಂದೆ ರಾಣಿ ಪಾರ್ಟು ಮಾಡಿದರೂ ಮಾಡಲಾದೀತು" ಎಂದು ಅವರು ಆಶ್ವಾಸನವನ್ನು ಕೊಟ್ಟರು. ಸುಬ್ಬಣ್ಣನವರಿಗೆ ಇದರಿಂದ ತೃಪ್ತಿ ಯಾಗಲಿಲ್ಲ. "ರಾಣಿ ಹಾಡಲೇಬೇಕೆ ?" ಎಂಬುದು ಅವರ ಪ್ರಶ್ನೆ. ಈ ಪ್ರಶ್ನೆಯ ಯಥಾರ್ಥತೆ ಆಚಾರ್ಯರ ಅರಿವಿಗೂ ಬಂದಿತ್ತಂತೆ; ಆದರೆ ಅವರು ಜನರನ್ನು ತೃಪ್ತಿಪಡಿಸಬೇಕಾಗಿತ್ತು. ಆದ್ದರಿಂದ ಸುಬ್ಬಣ್ಣನವರನ್ನು ತೃಪ್ತಿ ಪಡಿಸಲಾಗಲಿಲ್ಲ. "ಮಾಡಿದರೆ ರಾಣಿ ಪಾರ್ಟು. ಖರ್ಚೆ ಪಾರ್ಟು ನನಗೆ ಬೇಕಿಲ್ಲ" ಎಂದು ನಿರಾಶೆಗೊಂಡರೂ ನಿರ್ಭಯವಾಗಿ ನುಡಿದರು ಸುಬ್ಬಣ್ಣನವರು.

ಈ ನಿರ್ಭೀತ ಉತ್ತರದಿಂದ, ಪಾರ್ಟು ಮಾಡುವ ಸುಯೋಗ ಸಿಕ್ಕದಿದ್ದರೂ ಆಚಾರ್ಯರ ಹೃದಯದಲ್ಲಿ ಸ್ಥಾನ ದೊರೆಯಿತು ಸುಬ್ಬಣ್ಣನವರಿಗೆ. ಸುಬ್ಬಣ್ಣನವರು ಆಚಾರ್ಯರ ಆಪ್ತವರ್ಗಕ್ಕೆ ಸೇರಿದರು ; ಅವರ ಕಂಪೆನಿಯ ನಾಟಕಗಳನ್ನು ಎಷ್ಟು ಸಲ ಬೇಕಾದರೂ ಬಿಟ್ಟಿಯಾಗಿ ನೋಡುವ ಸುಯೋಗವನ್ನು ಪಡೆದು ಕೊಂಡರು. ನಾಟಕ ನೋಡುವ ಹವ್ಯಾಸದಲ್ಲಿ ಅವರ ಎಡೆಬಿಡದ ಜೊತೆ ಎಂದರೆ ನಮ್ಮ ಗುಮಾಸ್ತೆ ಗುಂಡಪ್ಪ.

ರಾಣಿ ಪಾರ್ಟು ಸಿಕ್ಕಲಿಲ್ಲವೆಂಬ ಕಾರಣದಿಂದ ನಿರಾಶರಾದ ಸುಬ್ಬಣ್ಣ ನವರು ಹುಲುಸಾಗಿ ಬೆಳೆಯಬಿಟ್ಟಿದ್ದ ಜುಟ್ಟನ್ನು ಒಂದು ಶುಭದಿನ ಬೋಳಿಸಿ ಬಿಟ್ಟರು. ಕಾಲಕ್ರಮದಲ್ಲಿ, ವರದಾಚಾರ್ಯರ ರಾಜಾಪಾರ್ಟಿನ ಅಭಿನಯ ವೈಭವವನ್ನು ಮೇಲಿಂದ ಮೇಲೆ ನೋಡಿ ನೋಡಿ, ತಾವೂ ರಾಜಾಪಾರ್ಟು ಮಾಡಬಹುದೆಂಬ ಹುಸಿ ನೆಚ್ಚಿಕೆಯಿಂದಲೋ ಏನೋ, ಹೊರವಾದ ಮೀಸೆ ಬಿಟ್ಟರು. ಎಂತಹ ಪರಿವರ್ತನೆ ! ಸುಬ್ಬಣ್ಣನವರ ಮೀಸೆಯ ಮಾಟಕ್ಕೆ ಮನಸೋತ ಒಬ್ಬ ಸಾಹುಕಾರ, “ನೀವು ರಾಜಾಪಾರ್ಟು ಮಾಡುವುದಾದರೆ ನಾನು ಒಂದು ನಾಟಕದ ಕಂಪೆನಿ ಪ್ರಾರಂಭಮಾಡುತ್ತೇನೆ” ಎಂದು ಸುಬ್ಬಣ್ಣ ನವರಲ್ಲಿ ಕೋರಿದನಂತೆ. “ವರದಾಚಾರ್ಯರ ಕಂಪೆನಿ ಬಿಟ್ಟು ಬೇರೆಯ ಕಡೆ ಪಾರ್ಟುಮಾಡುವುದಕ್ಕಿಂತ ಈ ಮೀಸೆಯನ್ನಾದರೂ ಬೋಳಿಸಿಯೇನು. ಮಾಡಿ ದರೆ ಆಚಾರ್ಯರ ಕಂಪೆನಿಯಲ್ಲಿ ಪಾರ್ಟು ಮಾಡಬೇಕು ; ಜವಾನನ ಪಾರ್ಟಾ ದರೂ ಸರಿಯೇ” ಎಂದು ಉತ್ತರ ಕೊಟ್ಟರಂತೆ ಸುಬ್ಬಣ್ಣನವರು. ಆಚಾರ್ಯರು ಸಾಯುವುದಕ್ಕೆ ಕೆಲವು ಕಾಲ ಮುಂಚೆ ತಮ್ಮ ಮೀಸೆಯನ್ನು ತೆಗೆಸಿಬಿಟ್ಟಿದ್ದರು. ಸುಬ್ಬಣ್ಣನವರು—“ರಾಜಾಪಾರ್ಟು ಮಾಡುವ ಆಚಾರ್ಯರೇ ಮೀಸೆ ತೆಗಸಿದರು. ತಿರಿದುಂಡು ತಿನ್ನುವ ನನಗೇಕೆ ಮೀಸೆ ?” ಎಂದು ತಾವೂ ಮೀಸೆ ತೆಗೆಸಿ ಬಿಟ್ಟರು. ಆಚಾರ್ಯರು ತೀರಿಕೊಂಡಾಗ ಸುಬ್ಬಣ್ಣನವರು ಗಳಗಳನೆ ಅತ್ತು ಬಿಟ್ಟರು.

ನಾಟಕದ ಗಿಲಿ ಹತ್ತಿದ್ದ ಸುಬ್ಬಣ್ಣನವರ ಜೀವನ ಒಂದು ರೀತಿಯಲ್ಲಿ ತಿರಿದುಣ್ಣುವ ಜೀವನವೇ ಆಗಿತ್ತು. ಮೊದಲು ನಾಟಕಕ್ಕೆ ಸೇರಬೇಕೆಂಬ ಉದ್ಯಮ ; ಆ ಬಳಿಕ ನಾಟಕ ನೋಡುವ ಉದ್ಯೋಗ—ಇವೆರಡು ಬಿಟ್ಟು ಅವರಿಗೆ ಬೇರೆಯ ಉದ್ಯೋಗವಿರಲಿಲ್ಲ. ಪಿತ್ರಾರ್ಜಿತವಾದ ಮನೆ, ಅಲ್ಪ ಸ್ವಲ್ಪ ಗದ್ದೆ ಇದ್ದುವು. ಕುಳಿತು ತಿಂಬವನಿಗೆ ಕುಡಿಕೆ ಹಣ ಸಾಲುತ್ತದೆಯೆ ? ಗದ್ದೆ ಮಾರಿಕೊಂಡಾಯಿತು ; ಮನೆ ಭೋಗ್ಯವಾಗಿ, ಸುಬ್ಬಣ್ಣನವರು ಹಲವಾರು ವರ್ಷ ತಮ್ಮ ಮನೆಗೆ ತಾವೇ ಬಾಡಿಗೆ ಕೊಡುತ್ತಿದ್ದರು. ಮೊದಮೊದಲಿನಲ್ಲಿ

ಸುಬ್ಬಣ್ಣನವರು ದೇಶಾವರೀ ಬ್ರಾಹ್ಮಣನಂತೆ ಎಲ್ಲಿ ಎಂದರೆ ಅಲ್ಲಿ ಊಟಕ್ಕೆದ್ದು ಬಿಡುತ್ತಿದ್ದರು ; ಆಗಿನ ಕಾಲದಲ್ಲಿ ಊರ್ಜಿತ ಸ್ಥಿತಿಯಲ್ಲಿದ್ದ ಮಹಾರಾಜರವರ ಪೂರ್ಣಯ್ಯನವರ ಅನ್ನಸತ್ರದಲ್ಲಿ ಬಹುತರ ಅವರು ನಿತ್ಯಬ್ರಾಹ್ಮಣ. ಅವರ ಪತ್ನಿ ತಮ್ಮ ಜೀವಿಕೆಗಾಗಿ ಕೂಲಿನಾಲಿ ಮಾಡುವ ಸ್ಥಿತಿಗೂ ಬಂದಿತು. ಕೆಲ ಕಾಲ ಹೀಗೆಯೇ ನಡೆದುಬಂದು, ಬೀದಿಯ ಜನದ ಆಡಿಕೆಯ ಮಾತು ಮನಸ್ಸಿಗೆ ಕಟುವಾಗಿ ಪರಿಣಮಿಸಿ, ಸುಬ್ಬಣ್ಣನವರು ಒಂದು ದಿನಸಿ ಅಂಗಡಿಯಲ್ಲಿ ಲೆಕ್ಕ ಬರೆಯುವ ಗುಮಾಸ್ತರಾದರು. ಅವರ ಒಬ್ಬನೇ ಮಗ ಕೈಗೆ ಬಂದು, ಅವನು ಎಲ್ಲಿಯೋ ಗುಮಾಸ್ತನಾಗಿ ಕೆಲಸಕ್ಕೆ ಸೇರಿ ಅವನಿಗೆ ಮದುವೆಯಾದಮೇಲೆ, ವೃದ್ಧ ದಂಪತಿಗಳಿಗೆ ಸ್ವಲ್ಪಮಟ್ಟಿನ ನೆಮ್ಮದಿಯ ಕಾಲ ಬಂದಿತು. ಸುಬ್ಬಣ್ಣ ನವರು ತಮ್ಮ ಕೆಲಸ ಬಿಟ್ಟರು. ಮಗನಿಗಾದರೂ ಅಂತಹದೇನೂ ಕೊಳ್ಳೆ ಹೋಗುವಷ್ಟು ವರಮಾನವಿರಲಿಲ್ಲ. ಮನೆಯಲ್ಲಿ ಸೊಸೆಯ ಬಾಯಿ ಮೇಲಾಗಿ, "ನಾವು ಗಳಿಸಿ ದುಡಿಯಬೇಕು ; ಇತರರು ಕುಳಿತು ತಿನ್ನಬೇಕು" ಎಂಬಂತಹ ಕೊಂಕು ನುಡಿಗಳು ಹಾರಾಡಲು ಮೊದಲಾದುವು. ಗಂಡನಿಗೆ ಬೆಂಬಲವಾಗ ಲೆಂದು, ಮಗನ ಮೇಲೆ ಭಾರವಾಗಬಾರದೆಂದು, ಸೋತು ನಡೆಯುವ ಸ್ವಭಾವದ ಸುಬ್ಬಣ್ಣನವರ ಪತ್ನಿ ಮಗನಿಗೆ ತಿಳಿಯದಂತೆ ಹೊರಗೆ ಕೂಲಿಗಾಗಿ ದುಡಿಯು ತ್ತಿದ್ದರು ; ಸೊಸೆ ದುಡಿಸಿಕೊಳ್ಳುತ್ತಿದ್ದಳು. ಈಗ ಜನ ಸೊಸೆಯನ್ನು ಅನ್ನ ತೊಡಗಿದರು. ಸುಬ್ಬಣ್ಣನವರು ಮಗ ಸೊಸೆಯ ಮೇಲೆ ಅಪವಾದ ಬರಬಾರ ದೆಂದು, ಬೇರೆಯ ಸಂಸಾರ ಹೂಡಿದರು. ಇಷ್ಟು ಹೊತ್ತಿಗಾಗಲೇ ಸುಬ್ಬಣ್ಣ ನವರ ದೇಹಸ್ಥಿತಿ ಕೆಡುತ್ತ ಬಂದಿತ್ತು. ತಾವು ದುಡಿಯಲಾರರು ; ಹೆಂಡತಿ ದುಡಿಯಬೇಕು. ಈ ಪೇಚಾಟದ ಸ್ಥಿತಿಯಲ್ಲಿ, ಅವರು ತಮ್ಮ ಹೆಂಡತಿಯನ್ನು ಭವಬಂಧನದಿಂದ ಬಿಡುಗಡೆಮಾಡಿ ಪಾದಸನ್ನಿಧಿಗೆ ಸೇರಿಸಿಕೊಳ್ಳುವಂತೆ ನಿತ್ಯವೂ ಭಗವಂತನಲ್ಲಿ ಮೊರೆಯಿಡುತ್ತಿದ್ದರು. ದೇವರು ಇವರ ಪ್ರಾರ್ಥನೆಯನ್ನು ಬೇಗನೆಯೇ ನಡಸಿಕೊಟ್ಟ. ಸುಬ್ಬಣ್ಣನವರು ಮತ್ತೆ ಮಗನ ಮನೆ ಸೇರಿದರು. ಹೆಂಡತಿ ಸತ್ತ ಎರಡು ಮೂರು ವರ್ಷ ಅವರು ತುಂಬ ಕೃಶರಾಗಿದ್ದರು. ಆಮೇಲೆ ಅವರು ಬದುಕಿದ್ದ ಉಳಿದ ನಾಲ್ಕೈದು ವರ್ಷ ಕಾಲ ತಕ್ಕಮಟ್ಟಿನ ಆರೋಗ್ಯ ಸ್ಥಿತಿಯಲ್ಲಿಯೇ ಇದ್ದರು.

ಸುಬ್ಬಣ್ಣನವರು ಕಡೆಗಾಲದ ಮುನ್ನ ಮನೆಬಿಟ್ಟು ಕದಲುತ್ತಿರಲಿಲ್ಲ. ಆದರೂ ಕೂಡ, ನಾವು ಬೀದಿಯ ಯುವಕರೆಲ್ಲ ಸೇರಿ ಮಾಡಿಕೊಂಡಿದ್ದ "ಬಾಲ ನಾಟಕ ಮಂಡಲಿ"ಗೆ ಆಗಾಗ್ಗೆ ಬರುತ್ತಿದ್ದರು. ನಮ್ಮ ಕೈಲಿ ಅನೇಕ ನಾಟಕ ಗಳನ್ನು ಆಡಿಸಿದರು. ನಮ್ಮ ನಾಟಕ ನೋಡುತ್ತಿದ್ದವರೆಂದರೆ ಬೀದಿಯ

ಹುಡುಗ ಹುಡುಗಿಯರು, ಕೆಲವರು ಹಿರಿಯರು. ನಾಟಕ ಮಂಡಲಿಯಲ್ಲಿ ನಾನೇ ಹಿರಿಯ; ಹೈಸ್ಕೂಲು ಮೇಲ್ತರಗತಿಯಲ್ಲಿ ಓದುತ್ತಿದ್ದೆ. ನಾನು ಬಹಳ ವಿದ್ಯಾವಂತನೆಂದು ಸುಬ್ಬಣ್ಣನವರ ಭಾವನೆ. ನನ್ನೊಡನೆ ನಿತ್ಯವೂ ನಾಟಕದ ವಿಚಾರವಾಗಿ ಅವರು ಏನಾದರೂ ಚರ್ಚೆ ಮಾಡುತ್ತಲೇ ಇದ್ದರು. ಒಂದು ಸಲ ನಾನು, "ಕೈಲಾಸಂ ಅಂತ ಒಬ್ಬರು 'ಪೋಲಿ ಕಿಟ್ಟಿ' ಅಂತ ಒಂದು ನಾಟಕ ಬರೆದಿದ್ದಾರೆ. ಆಡಿಸೋಣ ಅಂತ ಆಸೆ. ಅದು ಹೊಸ ಬಗೆಯ ಸಾಮಾಜಿಕ ಪ್ರಹಸನವಂತೆ. ನಿಮ್ಮ ಅಭಿಪ್ರಾಯ ಏನು ?" ಎಂದು ಸುಬ್ಬಣ್ಣನವರ ಸಲಹೆ ಕೇಳಿದೆ. ಅವರು—"ವರದಾಚಾರ್ಯರ ಹಿಂದೆಯೇ ನಾಟಕ ಹೋಯ್ತು. ಬೇರೆಯ ಕಂಪೆನಿಗಳು ಹುಟ್ಟಿಕೊಂಡರೂ ಆ ಮಟ್ಟಕ್ಕೆ ಬರಲಾರವು. ಆದ್ದರಿಂದ, ಹೊಸ ಬಗೆಯ ನಾಟಕ ಆಡೋದೇ ಮೇಲು" ಎಂದು ಪ್ರೋತ್ಸಾಹಕೊಟ್ಟರು. ನಾವು ಆಡಿದ ನಾಟಕ ನೋಡಿ ಮೆಚ್ಚಿಯೂ ಮೆಚ್ಚದರು. ಒಂದು ಟೀಕೆ ಮಾಡಿದರು: "ನಾಟಕವೇನೋ ಚೆನ್ನಾಗಿದೆ. ಹುಡುಗರು ಮಕ್ಕಳಿಗೆ ಸರಿ. ಜನಕ್ಕೆ ಹಿಡಿಸುವುದಿಲ್ಲ ಇಂತಹ ನಾಟಕ" ಎಂದರು. ನಾವು 'ಪೋಲಿಕಿಟ್ಟಿ' ಯಂತಹ ಹೊಸ ನಾಟಕಗಳನ್ನು ಆಡುವುದಕ್ಕೆ ತೊಡಗಿದ ಮೇಲೆ, ಸುಬ್ಬಣ್ಣ ನವರು ನಮ್ಮ ಮಂಡಲಿಗೆ ಬರುವುದು ಬಿಟ್ಟುಬಿಟ್ಟರು. ಅವರ ಮನೆಗೆ ಹೋಗಿ ಬನ್ನಿ ಎಂದು ಒಮ್ಮೆ ಕರೆದಾಗ—"ನಾನು ನಾಟಕ ಆಡಿದವನಲ್ಲ; ನಾಟಕ ನೋಡಿದವನು. ಜೀವನ ನಾಟಕದಲ್ಲೇನೋ ನಮ್ಮಪ್ಪ ಆ ಸೂತ್ರಧಾರ ಒಂದು ಪಾತ್ರ ಕೊಟ್ಟಿದ್ದ. ಅದರಲ್ಲೂ ನಾನು ಚೆನ್ನಾಗಿ ಆಡಲಿಲ್ಲ. ಬೀದಿಯ ಜನ 'ಸುಬ್ಬಣ್ಣನಿಗೆ ನಾಟಕದ ಹುಚ್ಚು' ಎಂದು ಬಯ್ಯುತ್ತಿದ್ದರು. ಹುಡುಗರು ನೀವು ನನ್ನನ್ನು 'ನಾಟಕದ ಸುಬ್ಬಣ್ಣನವರು' ಅಂತ ಕರೆಯುತ್ತೀರಿ. ಈ ಜನ್ಮಕ್ಕೆ ಇಷ್ಟೇ ನನ್ನ ಲಭ್ಯ. ನೀವು ಹೊಸ ನಾಟಕಗಳನ್ನು ಆಡಿ. ನನ್ನ ನಾಟಕ ಮುಗಿಯಿತು. ನಿಮ್ಮ ನಾಟಕ ನಡೆಯಲಿ" ಎಂದರು. ಅವರೊಡನೆ ಮಾತನಾಡಿದ್ದು ಅದೇ ಕಡೆಯ ಸಲವಾಯಿತು. ಬಹು ಬೇಗನೆಯೇ ಅವರು ಜೀವನ ನಾಟಕದಿಂದ ನಿಷ್ಕ್ರಮಿಸಿದರು.

ಸುಬ್ಬಣ್ಣನವರಿದ್ದ ಬೀದಿಯನ್ನು ಬಿಟ್ಟು ಹೊರಗಿನ ಲೋಕ ಅವರನ್ನರಿಯದು. ಬೀದಿಯ ಜನಕ್ಕೆ ಅವರು ಬರಿಯ ಹಾಸ್ಯಕ್ಕಾಗಿ ಮಾತ್ರ ನಾಟಕದ ಸುಬ್ಬಣ್ಣ ; ನನ್ನ ನೆನಪಿನಲ್ಲೇನೋ ಅವರು ಎಂದೆಂದೂ ನಿಜವಾಗಿ ನಾಟಕದ ಸುಬ್ಬಣ್ಣ. ಅವರಂತೆ ನಾಟಕದ 'ಹುಚ್ಚು' ಹಿಡಿದವರು ಎಷ್ಟು ಮಂದಿ ಇದ್ದಾರು ? ಅಂಥವರ ಸಂಖ್ಯೆ ಬೆಳೆದರೆ ಕನ್ನಡದ ನಾಟಕ ಬೆಳೆದಂತೆ.

# ಅರಮನೆ ಶಾಮರಾಯರು

ಅರಮನೆ ಶಾಮರಾಯರು ಮೈಸೂರಿನಲ್ಲಿ ನಮ್ಮ ಬೀದಿಯ ಪ್ರಖ್ಯಾತ ಮಹನೀಯರಲ್ಲೊಬ್ಬರು. ಆ ಕಾಲಕ್ಕೆ ಅವರು ಒಬ್ಬ ನುರಿತ ನಟರು. ರಾಜಾ ಪಾರ್ಟು ಮಾಡುತ್ತಿದ್ದರು ಎಂದ ಮೇಲೆ ಕೇಳಬೇಕೆ ? ಆದರೂ 'ನಾಟಕದ' ಶಾಮರಾಯರು ಎಂದು ಪ್ರಸಿದ್ಧರಾಗದೆ 'ಅರಮನೆ' ಶಾಮರಾಯರು ಎಂದು ಪ್ರಸಿದ್ಧಿಗೆ ಬಂದದ್ದು ವಿಧಿಯ ವೈಚಿತ್ರ್ಯಗಳಲ್ಲೊಂದು. ರಂಗಸ್ಥಳವನ್ನು ಒಮ್ಮೆಯೂ ಮೆಟ್ಟದೆ ನಮ್ಮ ಸುಬ್ಬಣ್ಣನವರು 'ನಾಟಕದ ಸುಬ್ಬಣ್ಣ' ಎಂದು ಖ್ಯಾತಿವೆತ್ತಿರಲಾಗಿ, ನಾಟಕ ಪ್ರಪಂಚದಲ್ಲಿಯೇ ತೇಲಿ ಮುಳುಗುತ್ತಿದ್ದ ಶಾಮ ರಾಯರು ಆ ಬಿರುದಿಗೆ ಪಾತ್ರರಾಗದಿದ್ದುದು ವಿಚಿತ್ರವಲ್ಲದೆ ಮತ್ತೇನು ? ಆದರೆ, 'ಅರಮನೆ' ಎಂಬ ವಿಶೇಷಣ ಅವರ ನಾಮಧೇಯಕ್ಕೆ ಅಂಟಿಕೊಂಡದ್ದು ಇನ್ನೂ ವಿಚಿತ್ರ.

ನಮ್ಮ ಬೀದಿಯಲ್ಲೇ ಅರಮನೆಯಲ್ಲಿ ಶಿರಸ್ತೇದಾರಿಕೆ ಮಾಡಿದ ಶ್ರೀನಿವಾಸ ರಾಯರೂ ಇದ್ದರು ; ಅಷ್ಟೇಕೆ, ನಮ್ಮ ಮನೆತನದ ತಲೆಯಾಳುಗಳೆಲ್ಲ ಒಂದಲ್ಲ ಒಂದು ಅರಮನೆಯ ಉದ್ಯೋಗ ಮಾಡಿದವರೇ. ಆದರೆ ಈ ಯಾರಿಗೂ ತಮ್ಮ ಹೆಸರಿನ ಹಿಂದೆ ಉದ್ಯೋಗ ಗೌರವವನ್ನು ಮೆರೆಯಿಸುವ ಬಿರುದು ಲಭಿಸಿರಲಿಲ್ಲ. ತಾವು ಮಾಡದ ಉದ್ಯೋಗದ ಗೌರವವನ್ನು ಹೊರುವ ಯೋಗ ಶಾಮರಾಯರದಾಯಿತು. ಇದಕ್ಕಾಗಿ ಅವರು ಬಹಳ ವ್ಯಥೆಪಟ್ಟರಂತೆ.

ನನಗೆ ಈಗಲೂ ಈಗ ಎನ್ನುವ ಹಾಗೆ ಕಣ್ಣಿಗೆ ಕಟ್ಟಿದಂತೆ ನೆನಪಿದೆ. ಶಾಮರಾಯರು ಬೀದಿಯಲ್ಲಿ ನಡೆದು ಹೋಗುತ್ತಿದ್ದ ಠೀವಿಯೇ ಠೀವಿ ; ರಾಜ ಠೀವಿ ಎನ್ನಬಹುದು ; ವಾಸ್ತವವಾಗಿ ಅದು ರಾಜಾಪಾರ್ಟಿನ ಠೀವಿ. ಅವರ ನಡಗೆಯನ್ನು ನೋಡಿ, "ನಾಟಕದಲ್ಲಂತೂ ರಾಜಾಪಾರ್ಟು ಸರಿಯೆ. ಬೀದಿ ಯಲ್ಲೂ ರಾಜಾಪಾರ್ಟು ಮಾಡಬೇಕೆ ? ಜೊತೆಗೆ ರಾಣಿಯೊಬ್ಬಳಿಲ್ಲ, ಅಷ್ಟೆ" ಎಂದು ನಾಟಕದ ಸುಬ್ಬಣ್ಣನವರು ಹಾಸ್ಯಮಾಡುತ್ತಿದ್ದರು. ಆ ಠೀವಿಯನ್ನು ಸ್ವಲ್ಪವಾದರೂ ಬಿಡಿಸಿ ಹೇಳದಿದ್ದರೆ ಅದೇನೆಂಬುದು ಗೊತ್ತಾಗದು. ನನಗೆ

ನೆನಪಿರುವ ಮಟ್ಟಿಗೆ ತುಸು ಬಣ್ಣಿಸಬಲ್ಲೆ ; ಸುಬ್ಬಣ್ಣನವರಾಗಿದ್ದರೆ ಅಭಿನಯಿಸಿ ತೋರಿಸುತ್ತಿದ್ದರು.

ಶಾಮರಾಯರು ತೀರ ಬಡವರಲ್ಲದಿದ್ದರೂ ಅಂತಹ ಉತ್ತಮವಾದ ಸ್ಥಿತಿಯಲ್ಲೇನಿರಲಿಲ್ಲ. ಹಾಸನ ಜಿಲ್ಲೆಯಲ್ಲಿ ಪಿತ್ರಾರ್ಜಿತವಾದ ಭೂಮಿ–ಕೆರೆಯ ಕೆಳಗಿನ ಗದ್ದೆ–ನಾಲ್ಕಾರು ಎಕರೆ ಇತ್ತು. ವರ್ಷಪೂರ್ತಿ ಸಾಕಾಗುವಷ್ಟು ದವಸ ದೊರೆಯುತ್ತಿತ್ತು. ಮನೆಯೂ ಸ್ವಂತ ಮನೆ ; ಪಿತ್ರಾರ್ಜಿತ ; ಮೂರಂಕಣದ ನಾಡು ಹೆಂಚಿನ ಕುಸುಕು ಮನೆ ; ನಾಟಕದ ಕಂಪೆನಿಯ ವರಮಾನ ; ಆಗ ಇನ್ನೂ ರಾಜಾಪಾರ್ಟು ಮಾಡುತ್ತಿರಲಿಲ್ಲ. ಎಂದ ಮೇಲೆ ಶಾಮರಾಯರ ಆರ್ಥಿಕ ಸ್ಥಿತಿಯನ್ನು ಊಹಿಸಿಕೊಳ್ಳಬಹುದು. ಅರಕ್ಕೆ ಹೆಚ್ಚದ ಬರಕ್ಕೆ ತಗ್ಗದ ತೂಕದ ಸಂಸಾರ. ಕಷ್ಟದ ಸಂಸಾರವೇ ಎನ್ನಬಹುದೇನೋ. (ಇದಕ್ಕೆ ಕಾರಣ, ಶಾಮರಾಯರ ಸ್ವಂತ ದುಂದುವೆಚ್ಚ ಎಂದು ಸುಬ್ಬಣ್ಣನವರ ಅಭಿಪ್ರಾಯ.) ಹೊರಗೆ ಬಂದರೆ ಮಾತ್ರ ಶಾಮರಾಯರು ಠೀಕು ರಾಜ : ಅವರ ಜರಿಯ ಪೇಟವೇನು, ಜರಿಯ ಪಂಚೆಯೇನು ! ಇನ್ನಿತರ ಉಡುಗೆ ತೊಡುಗೆಗಳೋ ! ಕಪ್ಪು ಸರ್ಜುಬಟ್ಟೆಯ ನಿಲುವಂಗಿ ; ಅದರ ಮೇಲೆ ಆಕಾಶ ವರ್ಣದ ಅಂಗವಸ್ತ್ರ. ಜೇಬಿನಲ್ಲಿ ಚಿನ್ನದ ಸರಪಣಿಯ ಗಡಿಯಾರ (ಚಿನ್ನದ ಮುಲಾಮಿನದು ಎಂದು ಸುಬ್ಬಣ್ಣನವರ ಹೇಳಿಕೆ) ; ಆ ಸರಪಣಿಗೇ ಸೇರಿಕೊಂಡಿದ್ದ ಚಿನ್ನದ ಪದಕ; ಬಲಗೈಯಲ್ಲಿ ಚಿನ್ನದ ಮುಲಾಮಿನ ಬೆಳ್ಳಿಯ ನಶ್ಯದ ಡಬ್ಬಿ. ಕಾಲಿಗೆ ಪೂನಾ ಚಡಾವು. ಹಿಂದೆ, ಅವರನ್ನು ಹಿಂಬಾಲಿಸುತ್ತಿದ್ದ, ಅವರ ಸಾಕಿದ ಜೂಲುನಾಯಿ—'ಜೂಲಿ'. ಶಾಮರಾಯರು ಬೀದಿಯಲ್ಲಿ ಹೋಗುತ್ತಿದ್ದರೆ, ಒಳಗೆ ಕುಳಿತಿದ್ದರೂ ನಮಗೆ ಅವರ ಆಗಮನ ನಿರ್ಗಮನಗಳ ಅರಿವುಂಟಾಗುತ್ತಿತ್ತು : ಇತರ ಬೀದಿ ನಾಯಿಗಳನ್ನು ಕಂಡು ಶಾಮರಾಯರ ನಾಯಿ, ಅವರ ಜೊತೆಯಲ್ಲಿ ಹೋಗುತ್ತಿದ್ದಾಗ ಮಾತ್ರ, ಗುರುಗುಟ್ಟುತ್ತಿತ್ತು (ಯಜಮಾನನಂತೆ ನಾಯಿ !) ; ಜೊತೆಗೆ, ಅವರ ಗಿರಿಕಿ ಚಡಾವಿನ ಜರ್‌ಬರ್ ಸದ್ದು. ಯಜಮಾನನಂತೆ ನಾಯಿ ಎಂದೆನಲ್ಲವೆ ? ಹೌದು. ಶಾಮರಾಯರ ಜಬರ್ಬು ಅಂತಹದು : ನುಡಿಯಲ್ಲಿ ನಡೆಯಲ್ಲಿ, ಗತ್ತಿನಲ್ಲಿ ಗಮನದಲ್ಲಿ, ಹಾವದಲ್ಲಿ ಭಾವದಲ್ಲಿ. ಹಿರಿಯರಾಗಲಿ ಕಿರಿಯರಾಗಲಿ ಸಮಾನಸ್ಕಂಧರಾಗಲಿ, ಯಾರೇ ಆಗಲಿ, ತಾವಾಗಿ ಶಾಮರಾಯರನ್ನು ಮಾತನಾಡಿಸಿ 'ನಮಸ್ಕಾರ' ಎನ್ನಬೇಕೇ ಹೊರತು ಅವರಾಗಿ ಯಾರಿಗೂ ತಲೆಬಾಗಿಸಿದವರಲ್ಲ, ಕೈಯೆತ್ತಿದವರಲ್ಲ. ಆದರೂ ಅವರ ಕೈಗಳು ಯಾವಾಗಲೂ ಸ್ವಲ್ಪ ಎತ್ತಿಯೇ ಇರುತ್ತಿದ್ದವು. ಕರವಸ್ತ್ರ

ಹಿಡಿದ ಎಡಗೈ ಗಡಿಯಾರದ ಜೇಬಿನ ಬಳಿ ಎದೆ ಮಟ್ಟದಲ್ಲಿ ಅದೊಂದು ಬಗೆಯ ಹಸ್ತಮುದ್ರಿಕೆಯಂತೆ ನೆಲಸಿರುತ್ತಿತ್ತು ; ಬೆತ್ತವನ್ನು ಹಿಡಿದ ಬಲಗೈ, ಒರೆಯ ಸಮೇತ ಕತ್ತಿಯನ್ನು ಹಿಡಿದ ಭಂಗಿಯಲ್ಲಿರುತ್ತಿತ್ತು. ಮೊದಮೊದಲಿನಲ್ಲಿ, ಎಂದರೆ ಅವರು ನಾಟಕದ ಕಂಪೆನಿಗೆ ಸೇರಿದ ಹೊಸತರಲ್ಲಿ, ರಾಜಾಪಾರ್ಟು ಮಾಡಬೇಕೆಂಬ ಮಹದಾಕಾಂಕ್ಷೆ, ಅದಕ್ಕಾಗಿ ಕಾಲದೇಶಗಳ ಗಮನವಿಲ್ಲದ ನಿತ್ಯಾಭ್ಯಾಸ ; ಆ ಸುಯೋಗ ಸಮನಿಸಿದ ಮೇಲೆ, ರಾಜಪಾತ್ರಾಭಿನಯದ ತಾದಾತ್ಮ್ಯಭಾವ ! ಅವರ ಜರ್ಬಿನ ತೋರಿಕೆಗೆ ಬಹುಶಃ ಕಾರಣ ಇದೇ ಎಂದು ನನ್ನ ಎಣಿಕೆ. ಆದರೆ ಬೀದಿಯ ಮಂದಿ ಅವರಿಗೆ ದುರಭಿಮಾನ, ದುರಹಂಕಾರ ಎನ್ನುತ್ತಿದ್ದುದನ್ನು ನಾನು ಕೇಳಿದ್ದೇನೆ.

ಶಾಮರಾಯರು ಬೀದಿಯಲ್ಲಿ ಹೀಗೆ ಜರ್ಬಿನಿಂದ ನಡೆದು ಹೋಗುತ್ತಿರಬೇಕಾದರೆ, ಅವರ ಪರಿಚಯವಿಲ್ಲದವರು ಕೂಡ ಅವರು ಯಾವುದೋ ನಾಟಕದ ಕಂಪೆನಿಯಲ್ಲಿ ರಾಜಾಪಾರ್ಟು ಮಾಡುತ್ತಿದ್ದಿರಬೇಕೆಂದು ಊಹಿಸ ಬಹುದಾಗಿತ್ತು. ಅವರ ಉಡುಗೆ ತೊಡುಗೆಯ ಬೆಡಗು ಮಾತ್ರವಲ್ಲದೆ ಅವರ ರೂಪಿನ ಗುಂಡುಗಾಡಿಯೇ ಹಾಗಿತ್ತು. ರಾಜಾಪಾರ್ಟಿಗೆ ತಕ್ಕ ಸೌಂದರ್ಯ ಸಂಪತ್ತು ಎಂದರೆ ಸಾಕು, ಹೆಚ್ಚಿನ ಬಣ್ಣನೆ ಅನಾವಶ್ಯಕ. ಅವರ ಮುಖಮಂಡಲದಲ್ಲಿ ಎದ್ದು ಕಾಣುತ್ತಿದ್ದ ವಿಶೇಷಗಳೆಂದರೆ ಅವರ ಮೀಸೆ, ಹುಬ್ಬು. ಸ್ತ್ರೀ ಪಾತ್ರ ವಹಿಸುತ್ತಿದ್ದವರು ಕೇಶರಾಶಿಯನ್ನು ಕತ್ತರಿಸಿಕೊಳ್ಳದೆ ಇಟ್ಟು ಕೊಳ್ಳುತ್ತಿದ್ದಂತೆ, ರಾಜಾಪಾರ್ಟು ಮಾಡುವವರು ಮೀಸೆ ಬಿಡುತ್ತಿದ್ದರು. ಇತರ ಪುರುಷ ಪಾತ್ರಧಾರಿಗಳು ಮೀಸೆ ಬೆಳಸುತ್ತಿರಲಿಲ್ಲ, ಅವಶ್ಯವಾದರೆ ನಾಟಕದ ದಿನ ಅದನ್ನು ಅಂಟಿಸಿಕೊಳ್ಳುತ್ತಿದ್ದರು ; ಹಾಗೆ ಮೀಸೆ ಬೆಳಸಿದ್ದೇ ಆದರೆ ರಾಜಾಪಾರ್ಟಿನಾತ ಅದನ್ನು ಸಹಿಸುತ್ತಿರಲಿಲ್ಲವೆಂದು ಕಾಣುತ್ತದೆ. ಅದು ಹೇಗಾದರೂ ಇರಲಿ. ಅಂತೂ, ಶಾಮರಾಯರು ಬಹು ಹೊರವಾಗಿ ಮೀಸೆ ಬೆಳಸಿದ್ದರು ; ಪದೇ ಪದೇ ಪದೇ ಅದನ್ನು (ಅಥವಾ ಅವುಗಳನ್ನು) ಬೆರಳುಗಳಿಂದ ಹುರಿ ಮಾಡುತ್ತಲೇ ಇದ್ದರು. ಅವರ ಹುಬ್ಬುಗಳ ವಿಶೇಷವೇ ನೆಂದರೆ, ಅವರ ಮೀಸೆಗಳಿಗೆ ಹೋಲಿಸಿದರೆ ಅವು ಸಣ್ಣವೇ ಆದರೂ ಇತರರ ಹುಬ್ಬುಗಳಿಗೆ ಹೋಲಿಸಿದರೆ ಅವು ಮೀಸೆಗಳ ಪ್ರಮಾಣದಲ್ಲಿಯೇ ಇದ್ದುವು ; ಮತ್ತೂ ವಿಶೇಷವೆಂದರೆ, ಎಡಹುಬ್ಬು ಯಾವಾಗಲೂ ಮೇಲಕ್ಕೆ ಎದ್ದಿರುತ್ತಿತ್ತು: 'ಪುರ್ವಿನ ಜರ್ವು !'

ಶಾಮರಾಯರಿಗೆ ಸಣ್ಣ ವಯಸ್ಸಿನಲ್ಲಿಯೇ ಮದುವೆಯಾಗಿತ್ತು. ಹೆಂಡತಿ ಮನೆಗೆ ಬಂದೊಡನೆಯೇ ಅವರ ತಂದೆ ತೀರಿಹೋದರು. ಎಳೆವರೆಯದಿಂದಲೂ

ಶಾಮರಾಯರಿಗೆ ನಾಟಕದ ಗೀಳು, ನಟನಾಗಬೇಕೆಂಬ ಹೆಬ್ಬಯಕೆ. ಆದರೆ, ತಂದೆ ಮಗನ ಇಚ್ಛೆಗೆ ವಿರೋಧವಾಗಿದ್ದರು. ತಂದೆ ತೀರಿಕೊಂಡ ಕೂಡಲೇ ಶಾಮರಾಯರು ಮುದಿ ತಾಯನ್ನೂ ಚಿಕ್ಕ ಹೆಂಡತಿಯನ್ನೂ ಮೂರು ತಿಂಗಳ ಮಗುವನ್ನೂ ಬಿಟ್ಟು ಮಹಾರಾಷ್ಟ್ರ ದೇಶಕ್ಕೆ ಓಡಿಹೋದರಂತೆ. ಅಲ್ಲಿ ಒಂದೆರಡು ಕಂಪೆನಿಗಳಲ್ಲಿ ಸಣ್ಣ ಸಣ್ಣ ಪಾತ್ರಗಳನ್ನು ನಿರ್ವಹಿಸಿ, ಕೆಲವು ಕಾಲ ಆಗತಾನೇ ಹುಟ್ಟಿಕೊಂಡಿದ್ದ ಶಿರಹಟ್ಟಿ ಕಂಪೆನಿಯಲ್ಲಿ ಪ್ರಧಾನ ಪಾತ್ರಗಳನ್ನೂ ವಹಿಸುತ್ತಿದ್ದ ರಂತೆ. ರಾಜಾಪಾರ್ಟಿಗಾಗಿ ಮೀಸೆಯನ್ನು ಬಿಟ್ಟರಂತೆ. ಆದರೆ ಆ ಪದವಿ ಅಲ್ಲಿ ಅವರಿಗೆ ದೊರಕಲಿಲ್ಲ. ರಾಜಾಪಾರ್ಟಿಲ್ಲದೆ ಬೇರೆಯಪಾರ್ಟು (ಪಾತ್ರ) ಮಾಡುವು ದಿಲ್ಲವೆಂಬುದು ಶಾಮರಾಯರ ಶಪಥ. ಆದ್ದರಿಂದ ಅವರು ರಾಜಾಪಾರ್ಟಿನ ಪದವಿಯಿಲ್ಲದೆ, ಅದಕ್ಕೆ ತಕ್ಕ ಆಕಾರದೊಂದಿಗೆ ಮೈಸೂರಿಗೆ ಹಿಂದಿರುಗಿದರು.

ಶಾಮರಾಯರು ಮೈಸೂರಿಗೆ ಹಿಂದಿರುಗಿದಾಗ ಅವರ ಗಂಡು ಮಗು ಎಂಟು ವರ್ಷದ ಹುಡುಗ. ನನ್ನ ಒಡನಾಡಿ. ನನ್ನ ವಯಸ್ಸು ಈಗ ಮೂವ ತ್ತೈದನ್ನು ದಾಟಿದೆ. ಎಂದಮೇಲೆ, ಶಾಮರಾಯರ ವಿಚಾರವಾಗಿ ನಾನು ಇದುವರೆಗೆ ಉಲ್ಲೇಖಿಸಿರುವುದೆಲ್ಲ ನಲವತ್ತು ವರ್ಷಗಳ ಹಿಂದಿನ ಮಾತು ; ನನಗೆ ಆಗಾಗ್ಗೆ ಸುಬ್ಬಣ್ಣನವರು ಹೇಳಿದ್ದು ಎಂಬುದನ್ನು ಬೇರೆ ಹೇಳಲೇ ಬೇಕಾಗಿಲ್ಲ. ಸುಬ್ಬಣ್ಣನವರ ಹೇಳಿಕೆಯೂ ನನ್ನ ಅನುಭವವೂ ಕೂಡಿ ಶಾಮ ರಾಯರ ಮುಂದಿನ ಕಥೆ ಹೀಗೆ :

ಶಾಮರಾಯರು ಮೈಸೂರಿಗೆ ಹಿಂದಿರುಗಿದರಷ್ಟೆ. ಆಗ ಮೈಸೂರಿನಲ್ಲಿ ಮಹಾರಾಜರವರ ಕಂಪೆನಿ, ದಿವಂಗತ ವರದಾಚಾರ್ಯರ ಕಂಪೆನಿ—ಇವೆರಡು ಪ್ರಸಿದ್ಧ ನಾಟಕ ಸಂಘಗಳು. ಅಲ್ಲಿ ಇವರಾಗಿಯೇ ಮೇಲೆ ಬಿದ್ದು ಹೋಗಿದ್ದರೂ ಇವರಿಗೆ ರಾಜಾಪಾರ್ಟು' ದೊರಕುವಂತಿರಲಿಲ್ಲ. ಮೈಸೂರಿನಲ್ಲಿ ಆಗ್ಗೆಯೂ ಈಗ್ಗೆಯೂ ಇಂದು ಹುಟ್ಟಿ ನಾಳೆ ಸಾಯುವ ನಾಟಕ ಸಂಘಗಳಿಗೆ ಕೊರತೆ ಯೇನಿಲ್ಲ. ಅಂಥ ಸಂಘಗಳಿಗೆ ಮೇಲೆಬಿದ್ದು ಹೋಗಲು ಶಾಮರಾಯರಿಗೆ ಬಿಗು ಮಾನ. ಆದ್ದರಿಂದ, ಕೆಲವು ವರ್ಷ ಶಾಮರಾಯರ ರಾಜಾಪಾರ್ಟು ಬರಿಯ ಬೀದಿಯಲ್ಲಿ ಮಾತ್ರ ಪ್ರದರ್ಶಿತವಾಗುತ್ತಿತ್ತು. ಆಮೇಲೆ ಇದ್ದಕ್ಕಿದ್ದಹಾಗೆಯೇ ಒಂದು 'ಟೂರಿಂಗ್' ನಾಟಕ ಸಂಘ ಜನ್ಮವೆತ್ತಿತು. ಶಾಮರಾಯರಿಗೆ ಆ ಕಂಪೆನಿಯಿಂದ ಕರೆ ಬಂದಿತು. ಅವರು ಅಲ್ಲಿಗೆ ಹೋದದ್ದೇ ಹೋದದ್ದು, ಅವರು 'ಟೂ ರಿ ಂ ಗ್ ರಾಜಾಪಾರ್ಟುದಾರ' ರಾದರು. ಇಲ್ಲಿ ಒಂದು ವಿವರಣೆ ಅಗತ್ಯ. ಶಾಮರಾಯರು ಆ ಸಂಘಕ್ಕೆ ಸೇರಿದಾಗ ಅದಕ್ಕೆ ಬರೆದುಕೊಟ್ಟ ಕರಾರು ಪತ್ರದಲ್ಲಿ, ಯಾವ ಇತರ ಸಂಘ ತನ್ನನ್ನು ಆಹ್ವಾನಿಸಿದರೂ ಅದರಲ್ಲಿ

ರಾಜಾಪಾರ್ಟು ಮಾಡುವ ಸ್ವಾತಂತ್ರ್ಯವನ್ನು ಕಾಯ್ದುಕೊಂಡಿದ್ದರು. ಅದಕ್ಕೆ ತಕ್ಕಂತೆ, ಚಿಲ್ಲರೆ ನಾಟಕ ಸಂಘಗಳಿಂದ ರಾಜಾಪಾರ್ಟು ಮಾಡಲು ಶಾಮರಾಯರಿಗೆ ಪದೇ ಪದೇ ಆಹ್ವಾನವೂ ಬರುತ್ತಿತ್ತು. ಆ ಚಿಲ್ಲರೆ ಸಂಘಗಳಿಗೆ ಮೈಸೂರು ನಗರದಲ್ಲಿ ನಾಟಕ ಪ್ರದರ್ಶನ ಮಾಡುವ ಧೈರ್ಯವಿರಲಿಲ್ಲ; ಸುತ್ತಮುತ್ತಣ ತಾಲ್ಲೂಕುಗಳಲ್ಲೂ ಹಳ್ಳಿಗಳಲ್ಲೂ ನಾಟಕಗಳನ್ನಾಡುತ್ತಿದ್ದುವು. ಹೇಗೂ, ಶಾಮರಾಯರ ಹೆಬ್ಬಯಕೆ ತೀರಿತು; ರಾಜಾಪಾರ್ಟು ಮಾಡುವ ಅವಕಾಶ ಲಭಿಸಿ, ಬಹುಕಾಲ ನಡೆದುಕೊಂಡು ಬಂದಿತು. ಶಾಮರಾಯರು ಪ್ರಸಿದ್ಧ ನಟರೆಂದು ಬೆಳಕಿಗೆ ಬಾರದಿದ್ದರೂ, ಪ್ರಸಿದ್ಧಿಯ ಅಭಾವದಿಂದ ಶಾಮರಾಯರಿಗೆ ಅತೃಪ್ತಿಯೇನೂ ಇದ್ದಂತೆ ಕಾಣಲಿಲ್ಲ. ಏಕೆಂದರೆ, ಶಾಮರಾಯರಿಗೆ ವರಮಾನ ತಕ್ಕಮಟ್ಟಿಗೆ ಬರುವಂತಾಗಿತ್ತು; ಅಲ್ಲದೆ, ತಮ್ಮ ಅಭಿನಯ ಸಾಮರ್ಥ್ಯದ ಪರಿಮಿತಿಯನ್ನು ಅವರು ಚೆನ್ನಾಗಿ ಅರಿತುಕೊಂಡಿದ್ದರೋ ಏನೋ. ಅಂತೂ, ಸುಬ್ಬಣ್ಣನವರು ಶಾಮರಾಯರನ್ನು ಮಾತನಾಡಿಸಿದಾಗಲೆಲ್ಲ "ನಾನು ನಿಮ್ಮ ರಾಜಾಪಾರ್ಟು ನೋಡುವುದು ಯಾವಾಗ ?" ಎಂದು ಕೇಳಿ, ತಮ್ಮ ಅಂಗೈ ನೀಡುತ್ತಿದ್ದರು. ಶಾಮರಾಯರು ಅವರ ಕೈಗೆ ಎರಡು ಚಿಟಿಕೆ ನಶ್ಯ ಹಾಕಿ, "ನೀವು ನನ್ನ ಜೊತೆ ರಾಣೀಪಾರ್ಟು ಮಾಡಿದಾಗ" ಎಂದು ಮರುನುಡಿಯುತ್ತಿದ್ದರು. ಒಬ್ಬರ ಹಾಸ್ಯ ಇನ್ನೊಬ್ಬರಿಗೆ ಚೆನ್ನಾಗಿ ಅರ್ಥವಾಗುತ್ತಿತ್ತು. ಬೀದಿಯವರೆಲ್ಲ ಹಾಗೆ ಕರೆಯದಿದ್ದರೂ, ಸುಬ್ಬಣ್ಣನವರ ಬಾಯಲ್ಲಿ ಮಾತ್ರ ಶಾಮರಾಯರು 'ಟೂರಿಂಗ್ ರಾಜ' ಎಂದು ಪ್ರಸಿದ್ಧರಾಗಿದ್ದರು.

ಶಾಮರಾಯರು ಅಂತಹ ಎತ್ತರದ ಆಳೇನಲ್ಲ. ಐದಡಿ ಒಂದಂಗುಲದ ಮನುಷ್ಯನನ್ನು ಕುಳ್ಳನೆಂದೇ ಎನ್ನಬಹುದೇನೋ. ಆದರೆ ಅವರ ಪಕ್ಕದ ಮನೆಯ ನಾಲ್ಕಡಿ ಒಂಭತ್ತು ಅಂಗುಲದ ಶೀನಪ್ಪ 'ಕುಳ್ಳ ಶೀನಪ್ಪ' ಎಂದು ನಮ್ಮ ಬೀದಿಯಲ್ಲಿ ಪ್ರಸಿದ್ಧರಾಗಿದ್ದರು. ಆದ್ದರಿಂದ ಶಾಮರಾಯರು 'ಕುಳ್ಳ ಮನೆ ಶಾಮರಾಯರು' ಎಂಬ ಕೀರ್ತಿಗೆ ಭಾಜನರಾಗಿದ್ದರು. ಈ ಕೀರ್ತಿಗೆ ಕಾರಣಭೂತಳಾದ ವ್ಯಕ್ತಿ ಹಾಲಿನ ಹನುಮಕ್ಕ. ಅವಳು ಪ್ರತಿಮನೆಯಲ್ಲೂ ಹಾಲಿನ ಲೆಕ್ಕ ಫೈಸಲಾಗುವಂದು, "ಆ ಕುಳ್ಳಮನೆ ಶಾಮರಾಯರು ನೋಡಿ, ವರ್ಷಾನುಗಾಲ ಟೂರು ಟೂರು ಅಂತಲೇ ಹಾಲಿನ ಲೆಕ್ಕ ಬಾಕೀನೇ" ಎಂದು ಗೊಣಗುತ್ತಿದ್ದಳು. ಅವಳಿಂದಾಗಿ ಎಲ್ಲರ ಬಾಯಲ್ಲೂ ಶಾಮರಾಯರ ಪ್ರಸ್ತಾಪ ಬಂದಾಗ ಕುಳ್ಳಮನೆ ಶಾಮರಾಯರು ಎಂದೇ ಸ್ಥಿರವಾಯಿತು.

ಈ 'ಕುಳ್ಳಮನೆ' ಶಾಮರಾಯರು ಕಾಲಕ್ರಮದಲ್ಲಿ 'ಅರಮನೆ' ಶಾಮರಾಯರಾದರು. ಬೀದಿಯವರೆಲ್ಲ ತಮ್ಮನ್ನು 'ಕುಳ್ಳಮನೆ' ಶಾಮರಾಯರು

ಎಂದು ಪರೋಕ್ಷದಲ್ಲಿ ಸಂಬೋಧಿಸುತ್ತಿದ್ದುದು ಅವರ ತಿಳಿವಳಿಕೆಗೂ ಬಂದಿತ್ತೆಂದು ಕಾಣುತ್ತದೆ. ಅಲ್ಲದೆ, ರಾಜಾಪಾರ್ಟು ಮಾಡುವ ತಮಗೆ, ತಮ್ಮ ಘನತೆಗೆ ಮನೆ ತಕ್ಕದ್ದಾಗಿರಲಿಲ್ಲವೆಂದೂ ಅವರಿಗೆ ಖಚಿತವಾಗಿರಬೇಕು. ಅಂತೂ, ಒಂದು ದಿನ ಅವರ ಕುಳ್ಳಮನೆ ಮುಂಭಾಗದಲ್ಲಿ ನೆಲಸಮವಾಯಿತು. ಆ ಸ್ಥಳದಲ್ಲಿ ಶಾಮರಾಯರು ಸೊಗಸಾದ ಮಹಡಿ ಮನೆಯನ್ನು ಕಟ್ಟುವ ಸಾಹಸಕ್ಕೆ ಕೈ ಹಾಕಿದರು. ಮನೆ ನೆಲಸಮವಾದ ಮೂರನೆಯ ದಿನದಿಂದಲೇ ಅವರ ಬಿರುದೂ ಮಾಯವಾಯಿತು. ಈ ಅಂಶವೂ ಅವರ ತಿಳಿವಳಿಕೆಗೆ ಬಂದು ಅವರಲ್ಲಿ ಹಿಗ್ಗು ಮೂಡಿರಬೇಕೆಂಬುದರಲ್ಲಿ ಸಂದೇಹವಿಲ್ಲ. ಅವರು ತಮ್ಮ ಹೆಸರಿನ ಹಿಂದಿನ ಇಷ್ಟ ವಿಲ್ಲದ ಬಿರುದನ್ನು ನಿಮಿಷ ಮಾತ್ರದಲ್ಲಿ ತೊಡೆದುಹಾಕಿಕೊಂಡರು. ಆದರೆ ಅದರ ಸ್ಥಾನದಲ್ಲಿ ಅವರ ಮನೆಯ ನಿಮಿತ್ತದಿಂದಲೇ ಬೇರೊಂದು ವಿಶೇಷಣ ಬಂದು ನೆಲಸಬಹುದೆಂಬುದನ್ನು ಅವರು ಕನಸಿನಲ್ಲಿಯೂ ಕಂಡಿರಲಾರರು.

ಶಾಮರಾಯರು ತಮ್ಮ ವರಮಾನದಲ್ಲಿ ಗೃಹಕೃತ್ಯದ ವೆಚ್ಚ ಕಳೆದು ಒಂದೆರಡು ಸಾವಿರ ರೂಪಾಯಿಗಳನ್ನು ಕೂಡಿಹಾಕಿದ್ದರು. ಆಗಿನ ಕಾಲಕ್ಕೆ, ಅವರು ಹಾಗೆಂದು ಮನಸ್ಸು ಮಾಡಿದ್ದರೆ, ಒಂದು ಸೊಗಸಾದ ಎತ್ತರವಾದ ಮನೆಯನ್ನೇ ಕಟ್ಟಿಸಿಕೊಳ್ಳುವುದು ಅಷ್ಟೇನೂ ಕಷ್ಟವಾಗುತ್ತಿರಲಿಲ್ಲ. ಆದರೆ ಅವರ ಮನೆಯ ಪ್ಲ್ಯಾನು (ನಕ್ಷೆ) ಭಾರಿ ಪ್ಲ್ಯಾನು. ನಿವೇಶನ ಕೇವಲ ಮೂರು ಅಂಕಣದ ದಾಯವಾದ್ದರಿಂದ, ವಿಸ್ತಾರವಾದ ಮನೆಯನ್ನು ಪಡೆಯಬೇಕಾದರೆ ಮಹಡಿಯ ಮನೆಯೇ ಆಗಬೇಕು; ಬೀದಿಯಲ್ಲಿ ಮಣ್ಣಿನ ಗೋಡೆಯ ಮನೆಗಳೇ ಹೆಚ್ಚಾಗಿದ್ದುವಾದ್ದರಿಂದ ತಮ್ಮದು ಇಟ್ಟಿಗೆಯ ಮನೆಯೇ ಆಗಬೇಕು ; ಒಂದು ಅಂತಸ್ತಿನ ಮಹಡಿಯ ಮನೆಗಳು ಬೀದಿಯಲ್ಲಿ ಒಂದೆರಡು ಇದ್ದುವಾದ್ದರಿಂದ ತಮ್ಮದು ಎರಡು ಅಂತಸ್ತುಗಳ ಮಹಡಿಯ ಮನೆಯಾದರೂ ಆಗಬೇಕು ; ತಮ್ಮದು ಪೂರ್ತಿ ತಾರಸಿಯ ಮನೆಯೇ ಆದರೆ ಹೆಚ್ಚಿನ ವೈಶಿಷ್ಟ್ಯ. ಮಹಡಿಯ ಮನೆಗಳ ಪೈಕಿ ಒಂದು ಒಬ್ಬರು ಅರಸಿನವರದ್ದು. ಆ ಅರಸಿನವರ ಮನೆಯನ್ನು ಮೆಟ್ಟಿ ನಿಲ್ಲಬೇಕು ತಮ್ಮ ಮನೆ. 'ಅರಸಿನವರ ಮನೆ'ಗಳೆಲ್ಲಾ 'ಅರಮನೆ'ಯಾಗ ದಿದ್ದರೂ,'ತಮ್ಮ ಮನೆ ಅರಮನೆಯಂತಿರಬೇಕು' ಎಂಬ ಭಾವನೆಯಲ್ಲಿ ಓಲಾಡಿದರು ಶಾಮರಾಯರು. ಈ ಭವನ ನಿರ್ಮಾಣ ಖುದ್ದಾಗಿ ತಮ್ಮ ನೇತೃತ್ವದಲ್ಲೇ ನಡೆದರೆ ಲಾಭದಾಯಕವೆಂದು ಅವರ ಇನ್ನೊಂದು ತೀರ್ಮಾನ.

ಅಂತೂ ಭವನನಿರ್ಮಾಣ ಕಾರ್ಯ ಶುಭಲಗ್ನದಲ್ಲೇ ಪ್ರಾರಂಭ ವಾಯಿತು. ಗುದ್ದಲಿ ಪೂಜೆಯ ಪುರಿಯ ಚೆರಪನ್ನು ನಾನೂ ಪಡೆದೆ ; ಇದು ನನಗೆ ಚೆನ್ನಾಗಿ ನೆನಪಿದೆ.

ಮನೆಯ ಪಾಯ ಐದಾರು ಅಡಿಗಳ ಆಳಕ್ಕೆ ಇಳಿದಿತ್ತೆಂದು ಕಾಣು ತ್ತದೆ. ಆದರೊಳಕ್ಕೆ ಇಳಿದು ನಾವು ಹುಡುಗರೆಲ್ಲ ಕೆಲವು ದಿನ ಆಟವಾಡುತ್ತಿ ದ್ದೆವು. ಕಲ್ಲಿನ ತಳಗಟ್ಟಡ ಬಹಳ ಮಜಬೂತಾಗಿಯೇ ಮೇಲಕ್ಕೆದ್ದಿತು. "ಏನು, ಒಳ್ಳೆಯ ಅರಮನೆಯನ್ನೇ ಕಟ್ಟಿಸುವ ಹಾಗೆ ಕಾಣುತ್ತೆ" ಎಂದು ತಳ ಗಟ್ಟಡವನ್ನು ನೋಡಿ ಸುಬ್ಬಣ್ಣನವರು ಹೊಗಳಿದ್ದೂ ಉಂಟು. ತಳಗಟ್ಟಡ ಕಟ್ಟಿದ ಮೇಲೆ ಸುಮಾರು ಮೂರು ನಾಲ್ಕು ವರ್ಷಗಳ ಕಾಲ ಅದು ನಮ್ಮ (ಎಂದರೆ ಬೀದಿಯ ಹುಡುಗರ) ಕ್ರೀಡಾಕ್ಷೇತ್ರವಾಗಿತ್ತು. ಶಾಮರಾಯರ ಮಗ ನಮ್ಮ ಒಡನಾಡಿ ; ಅವರೂ ಪದೇ ಪದೇ 'ಟೂರ್' ಹೋಗುತ್ತಿದ್ದರು. ನಮಗೆ ಯಾರ ಅಂಕೆ ?

ನಾಲ್ಕು ವರ್ಷ ಕಟ್ಟಡ ಏಳದಿದ್ದರೂ ಇಟ್ಟಿಗೆ ಕಲ್ಲು, ಮರಮುಟ್ಟು ಇವುಗಳ ಸಂಗ್ರಹಣ ಕ್ರಮವಾಗಿ ನಡೆಯುತ್ತ ಇತ್ತು. ಆದರೂ ಸಾಮಗ್ರಿ ಸಂಗ್ರಹಣ ಸಾಲದು. ಒಂದು ತಿಂಗಳು ಒಂದು ಗಾಡಿ ಇಟ್ಟಿಗೆ ; ಇನ್ನೊಂದು ತಿಂಗಳು ಒಂದು ಗಾಡಿ ಚಪ್ಪಡಿ ಕಲ್ಲು ; ಹೀಗೆ ಮೊದಲನೆಯ ಮಹಾಯುದ್ಧದ ನಾಲ್ಕು ವರ್ಷಕಾಲವೂ ಕಟ್ಟಡ ಸಾಮಗ್ರಿಗಳ ಶೇಖರಣೆಯೇ ನಡೆಯಿತು. ಬಂದು ಬಿದ್ದ ಇಟ್ಟಿಗೆಗಳನ್ನು ಜೋಡಿಸಿಡುವುದರಲ್ಲಿ ನಾನೂ ಕೊಂಚ ನೆರವಾಗಿದ್ದೆ. ಯುದ್ಧ ನಿಂತಮೇಲೆ ಮುಂಭಾಗದಿಂದ ಮನೆಯ ಕಟ್ಟಡ ಪ್ರಾರಂಭವಾಯಿತು. ಕಟ್ಟಡವೂ ನಿಧಾನವಾಗಿಯೇ ಸಾಗುತ್ತಿತ್ತು ; ಒಂದು ತಿಂಗಳು ಮುಂದಿನ ಗೋಡೆ, ಇನ್ನೊಂದು ತಿಂಗಳು ಒಂದು ಪಕ್ಕದ ಗೋಡೆ, ಅದರ ಮುಂದಿನ ತಿಂಗಳು ಅರ್ಧ ನಡುಗೋಡೆ ; ಹೀಗೆ ಮುಂಭಾಗದ ಮೂರಂಕಣದ ದಾಯದ ಕಟ್ಟಡ ಮುಗಿದ ಬಳಿಕ ಒಳಗೆ ಒಂಭತ್ತು ಅಂಕಣಗಳ ದೊಡ್ಡ 'ಹಾಲು' ಅಥವಾ ಹಜಾರ—ಇದರ ಕಟ್ಟಡ ಪ್ರಾರಂಭ. ಅದರಲ್ಲಿ ನಾಲ್ಕು ಭರ್ಜರಿ ಕೆತ್ತನೆ ಕೆಲಸದ ಮರದ ಸ್ತಂಭಗಳು. (ಹೆಬ್ಬಾಗಿಲಿನ ಬಾಗಿಲವಾಡವೂ ಒಳ್ಳೆಯ ಚಿತ್ರ ಕೆಲಸದಿಂದ ಮೆರೆಯುತ್ತಿತ್ತು.) ಆಮೇಲೆ, ಸ್ತಂಭಗಳ ಮೇಲೆ ಭಾರಿ ತೊಲೆ ಗಳೂ ಅದಕ್ಕೆ ತಕ್ಕ ಪ್ರಮಾಣದ ಜಂತೆಗಳೂ ಬಂದು ನೆಲಸಿದುವು. ಅಂತೂ ಮೂರು ವರ್ಷ ಕಾಲದಲ್ಲಿ ಮನೆಯ ಅಸ್ಥಿಪಂಜರವೊಂದು ಸಿದ್ಧವಾಯಿತು. ಆಕಾಶವೇ ಇನ್ನೂ ಛಾವಣಿಯಾಗಿದ್ದುದರಿಂದ ಶಾಮರಾಯರ ಸಂಸಾರದ ವಾಸ ವೆಲ್ಲ ಹಿಂದುಗಡೆ ಉಳಿಸಿಕೊಂಡಿದ್ದ ಹಳೆಯ ಕಟ್ಟಡದ ಮೂರಂಕಣದ ಜೋಪಡಿ ಯಲ್ಲೇ ನಡೆಯಬೇಕಾಗಿತ್ತು. ಹಳೆಯ ಮನೆ ಇಲ್ಲ , ಹೊಸ ಮನೆಯೂ ಇಲ್ಲ —ಅನೇಕ ವರ್ಷ ಈ ದುರವಸ್ಥೆಗೆ ಒಳಗಾದರು ಶಾಮರಾಯರು. "ಶಾಮ ರಾಯರ ಈ ಕಂತುಕಟ್ಟಡ ಮುಗಿಯುವುದೆಂದಿಗೆ !" ಎಂದು ಸುಬ್ಬಣ್ಣನವರು

ಹಾಸ್ಯಮಾಡುತ್ತಿದ್ದರು. ಅಂತೂ ಕಟ್ಟಡ ಮುಗಿಯಲು ಇನ್ನೂ ಅನೇಕ 'ಕಂತು'ಗಳನ್ನು ಕಟ್ಟಬೇಕಾಗಿತ್ತು. ಶಾಮರಾಯರ ಬಂಡವಾಳವೂ ಬರಿದಾಯಿತೆಂದು ಕಾಣುತ್ತದೆ, ಪಾಪ ; ವಾಸಕ್ಕೂ ಯೋಗ್ಯವಾಗದೆ ಮನೆ ಅರ್ಧಕ್ಕೇ ನಿಂತಿತು. ಆ ಸಂದರ್ಭದಲ್ಲಿ ಶಾಮರಾಯರು ತಮ್ಮ ಮಗಳ ಮದುವೆಯನ್ನೂ ಮಾಡಲೇಬೇಕಾಗಿ ಬಂದು, ಅದನ್ನು ಅವರು ತಮ್ಮ ಎದುರುಮನೆಯಲ್ಲಿ ನೆರವೇರಿಸಿದರು.

'ಮನೆ ಕಟ್ಟಿ ನೋಡು, ಮದುವೆ ಮಾಡಿ ನೋಡು' ಎಂಬ ಗಾದೆಯ ಸಂಪೂರ್ಣಾನುಭವ ಶಾಮರಾಯರಿಗೆ ಬಹಳ ವೆಚ್ಚಕ್ಕೆ ಲಭಿಸಿದಂತಾಯಿತು. ಅರ್ಧ ಮನೆಯ ಕಟ್ಟಡ, ಮಗಳ ಮದುವೆ—ಇವೆರಡೂ ಅವರು ಕೂಡಿಟ್ಟಿದ್ದ ಹಣವನ್ನೂ ಅವರ ಜಮೀನನ್ನೂ ನುಂಗಿ, ಅವರನ್ನು ಸಾಲಗಾರರನ್ನಾಗಿ ಮಾಡಿತು. ಹಾಗೂ ಹೀಗೂ ಒಂದೆರಡು ವರ್ಷ ನೂಕಿದರು. ಅರ್ಧ ಕಟ್ಟಿದ ಮನೆ, ಮಳೆಯ ಹೊಡೆತಕ್ಕೆ ಶಿಥಿಲವಾಗುತ್ತಿತ್ತು ; ಸಾಲದ ಹೊಡೆತಕ್ಕೆ ಸಿಲುಕಿ ಅವರ ದೇಹ ಶಿಥಿಲವಾಗುತ್ತ ಬಂದಿತ್ತು. ಅವರ ಮುಖದ ಆ ರಾಜವರ್ಚಸ್ಸೇ ತೆಗೆದುಹೋಯಿತು. ರಾಜಾಪಾರ್ಟಿಗೆ ಕರೆಬರುವುದೂ ಕಡಮೆಯಾಯಿತು. ವರಮಾನವೂ ಕಡಮೆಯಾಗಿ, ನಿತ್ಯಕಟ್ಟಳೆಯ ಸಂಸಾರವನ್ನು ತೂಗಿಸಿಕೊಂಡು ಹೋಗುವುದೇ ದುಸ್ತರವಾಯಿತು.

'ಅರಮನೆ ಶಾಮರಾಯರು' ಎಂಬ ಬಿರುದೂ ಬಹುಶಃ ಹಾಲಿನ ಹನುಮಕ್ಕನಿಂದಲೇ ಪ್ರಚಾರಕ್ಕೆ ಬಂದಿರಬೇಕೆಂದು ಕಾಣುತ್ತದೆ. ಶಾಮರಾಯರ ಬಗ್ಗೆ ಅವಳ ಟೀಕೆ ಎಂದಿನಂತೆ ಮನೆಮನೆಯಲ್ಲೂ ನಡೆಯುತ್ತಿದ್ದಿರಬೇಕು. ನಮ್ಮ ಮನೆಯಲ್ಲೇ ನಮ್ಮ ತಂದೆಯೊಡನೆ ಅವಳು ಅವರನ್ನು ಕುರಿತು ಒಮ್ಮೆ ದೂರಿದಳು : "ಮೊದಲೆಲ್ಲಾ ಟೂರು ಟೂರು ಅಂತಲೇ ಲೆಕ್ಕ ಬಾಕಿ ಉಳಿಸಿಕೊಳ್ಳುತ್ತಿದ್ದರು. ಈಗ ಮೂರು ಹೊತ್ತೂ ಮನೆಯಲ್ಲೇ ಇರುತ್ತಾರೆ. ಆರು ತಿಂಗಳಿಂದ ಲೆಕ್ಕ ಬಾಕಿ, ೬೦—೭೦ ರೂಪಾಯಿ ಕೊಡಬೇಕು" ಎಂದಳು. "ಯಾರು ?" ಎಂದು ಪ್ರಶ್ನಿಸಿದರು ನಮ್ಮ ತಂದೆ. "ಅದೇ, ಆ ಅರಮನೆ ಶಾಮರಾಯರು" ಎಂದಳು ಹನುಮಕ್ಕ. "ಅರಮನೆ ಶಾಮರಾಯರು ಯಾರೇ, ನನಗೆ ಗೊತ್ತಿಲ್ಲದವರು ?" ಎಂದು ಕೇಳಿದರು ನಮ್ಮ ತಂದೆ. "ಆ ಅರ್ಧ ಮನೆ ಕಟ್ಟಿಕೊಂಡು ಕುಂತಿದ್ದಾರಲ್ಲ, ಅವರು" ಎಂದು ವ್ಯಾಖ್ಯಾನಮಾಡಿದಳು ಹನುಮಕ್ಕ. "ಓ, ಅವರೇ" ಎಂದು ನಕ್ಕರು ನಮ್ಮ ತಂದೆ; ಆಮೇಲೆ "ಅಯ್ಯೋ ಪಾಪ" ಎಂದರು ; "ಕೊಡುತ್ತಾರೆ, ಎಲ್ಲಿ ಹೋಗುತ್ತೆ" ಎಂದು ಸಮಾಧಾನ ಹೇಳಿದರು.

ಹನುಮಕ್ಕನ ಬಾಯಲ್ಲಿ 'ಅರೆಮನೆ' 'ಅರಮನೆ'ಯಾಗಿ ಪರಿಣಮಿಸಿತ್ತು.

ಈ ಹೊಸ ವಿಶೇಷಣ ಕ್ರಮೇಣ ಎಲ್ಲರ ಬಾಯಿಗೆ ಬಿದ್ದು, ಎಲ್ಲರ ಬಾಯಲ್ಲೂ ಅಂತೆಯೇ ನುಡಿಯುತ್ತಿತ್ತು. ಭಾಷಾಶಾಸ್ತ್ರಜ್ಞರು ಈ ವಿಚಾರವಾಗಿ ಏನು ಹೇಳುತ್ತಾರೆಯೋ ನಾನು ಕಾಣೆ; ಅಂತೂ ನಮ್ಮ ಬೀದಿಯವರ ನಾಲಗೆಯಲ್ಲಿ ಹಾಗೆಯೇ ಖಚಿತವಾಗಿ ನುಡಿಯುತ್ತಿತ್ತು.

ಒಮ್ಮೆ ಈ ಬಿರುದು ಶಾಮರಾಯರ ಕಿವಿಗೇ ಬಿದ್ದು ಅವರು ರೇಗಿ, ವ್ಯಥೆಗೊಳ್ಳುವ ಪ್ರಸಂಗವೂ ಸಂಭವಿಸಿತು.

ನಮ್ಮ ಬೀದಿಗೆ ಹೊಸದಾಗಿ ಇನ್ನೊಬ್ಬರು ಶಾಮರಾಯರು ತೆರವಾಗಿದ್ದ ಮನೆಯೊಂದಕ್ಕೆ ಬಾಡಿಗೆಗೆ ಬಂದಿದ್ದರು. ಅವರನ್ನು ಹುಡುಕಿಕೊಂಡು ಅವರ ಗೆಳೆಯರೋ ನಂಟರೋ ಯಾರೋ ಬಂದು, ಮನೆ ಗೊತ್ತಾಗದೆ, ಬೀದಿಯಲ್ಲಿ ಹೋಗುತ್ತಿದ್ದವರನ್ನು ವಿಚಾರಿಸಿದರು. ಹಾಗೆ ಹೋಗುತ್ತಿದ್ದವರು ನಮ್ಮ ಬೀದಿಯವರಲ್ಲ. ಆದ್ದರಿಂದ ಸರಿಯಾದ ಉತ್ತರ ಬರಲಿಲ್ಲ. ಅಷ್ಟು ಹೊತ್ತಿಗೆ ಸುಬ್ಬಣ್ಣನವರು ತಮ್ಮ ಮನೆಯಿಂದ ಹೊರಕ್ಕೆ ಬಂದು ಎಲ್ಲಿಗೋ ಹೋಗುವುದ ರಲ್ಲಿದ್ದರು. ಆಗಂತುಕರು ಸುಬ್ಬಣ್ಣನವರನ್ನು ಕುರಿತು, "ಶಾಮರಾಯರ ಮನೆ ಯಾವುದು ?" ಎಂದು ಕೇಳಿದರು. ಸುಬ್ಬಣ್ಣನವರು, "ಯಾವ ಶಾಮರಾಯರು, ಅರಮನೆ ಶಾಮರಾಯರೆ ?" ಎಂದು ಪ್ರಶ್ನಿಸಿದರು. ಆಗಂತುಕರು, "ಹೌದು ಅವರಿಗೆ ಅರಮನೆ ಕಚೇರಿಯಲ್ಲೇ ಕೆಲಸ" ಎಂದರು. ಸುಬ್ಬಣ್ಣನವರು, "ಓಹೋ ! ಅವರಿಗೆ ಅರಮನೆ ಕಚೇರಿಯಲ್ಲೋ ಕೆಲಸ ? ಹಾಗಾದರೆ ಅವರ ಮನೆ ಅದು. ನಾನು ಹೇಳಿದ್ದು ಈ ಶಾಮರಾಯರು" (ಎಂದು ಶಾಮರಾಯರ ಅರ್ಧ ಮನೆಯ ಕಡೆಗೆ ಕೈತೋರಿಸಿ), "ಅರ್ಧ ಮನೆ ಶಾಮರಾಯರು-ಬೀದಿ ಯವರೆಲ್ಲ ಅವರನ್ನು ಈಚೆಗೆ ಅರಮನೆ ಶಾಮರಾಯರು ಅಂತಲೇ ಕರೆಯುವುದು" ಎಂದು ಅನಾವಶ್ಯಕವಾದ ವ್ಯಾಖ್ಯಾನವನ್ನು ಬೇರೆ ಮಾಡಿದರು. ಸುಬ್ಬಣ್ಣ ನವರು ಕೈತೋರಿಸುವ ಹೊತ್ತಿಗೆ ಸರಿಯಾಗಿ ಶಾಮರಾಯರು ಅಲ್ಲಿಗೆ ಬಂದಿದ್ದರು. ಸುಬ್ಬಣ್ಣನವರು ಆಡಿದ ಮಾತನ್ನು ಹಿಂತೆಗೆದುಕೊಳ್ಳುವ ಹಾಗಿರಲಿಲ್ಲ, ಶಾಮ ರಾಯರು, "ಏನು ಸುಬ್ಬಣ್ಣ, ನನ್ನ ಅರ್ಧ ಮನೆ ನಿನ್ನ ಹಾಸ್ಯಕ್ಕೂ ಕಾರಣ ವಾಗಿದೆಯೆಂದು ನನಗೆ ತಿಳಿದಿರಲಿಲ್ಲ. ನಿನ್ನ ಬಾಯ ಹರಕೆಯಿಂದ ನಾನು ಸಾಯುವುದಕ್ಕೆ ಮುಂಚೆ ನನ್ನ ಅರ್ಧ ಮನೆಯನ್ನು ಅರಮನೆಯನ್ನಾಗಿಯೇ ಮಾಡುತ್ತೇನೆ" ಎಂದು ಘೋರವಾದ ಪ್ರತಿಜ್ಞೆಯನ್ನು ಮಾಡಿ, ತಮ್ಮ 'ರಾಜ' ಮೀಸೆಯನ್ನು ತಿರುವಿ ಭರಭರನೆ ಹೊರಟುಹೋದರು. ಸುಬ್ಬಣ್ಣನವರು ಆ ಮೇಲೆ ಶಾಮರಾಯರ ಮನೆಗೆ ಹೋಗಿ, ತಾವು ಮನನೋಯಿಸಬೇಕೆಂದು ಹಾಸ್ಯದ ಮಾತಾಡಲಿಲ್ಲವೆಂದೂ, ಬೀದಿಯವರೆಲ್ಲ ಈಚೆಗೆ ಆಡುತ್ತಿದ್ದ ಮಾತನ್ನೇ

ಅಭ್ಯಾಸ ಬಲದಿಂದ ಆಡಿಸುದಾಗಿಯೂ ತಿಳಿಸಿ, ಅವರ ಕ್ಷಮೆ ಬೇಡಿ, ಅವರ 'ಅರೆಮನೆ'ಯನ್ನು ನಿಜವಾಗಿಯೂ ಅರಮನೆಯನ್ನಾಗಿಯೇ ಮಾಡುವ ಉಪಾಯದ ಆಲೋಚನೆಯಲ್ಲಿ ಅವರ ಮಂತ್ರಿಗಳಾದರು.

ಸುಬ್ಬಣ್ಣನವರ ಮಂತ್ರಿತ್ವ ಲಭಿಸಿಯೂ ನಾಟಕದ ರಾಜನಾಗಿದ್ದ ಶಾಮರಾಯರು ತಮ್ಮ 'ಅರೆಮನೆ'ಯನ್ನು 'ಅರಮನೆ'ಯನ್ನಾಗಿ (ಎಂದರೆ ಅರಮನೆ ಎಂದು ಹೊಗಳಿಸಿಕೊಳ್ಳುವ ಮಟ್ಟಿಗೆ) ಮಾಡಲು ಸಾಧ್ಯವಾಗಲಿಲ್ಲ. ಏಕೆಂದರೆ, ಮೇಲಿನ ಮಾತು ನಡೆದ ಒಂದು ವರ್ಷದೊಳಗಾಗಿ ವಿಧಿ ಶಾಮರಾಯರನ್ನು ಯಮರಾಜನ ವಿಶ್ವವಿಶಾಲವಾದ ಅರಮನೆಗೆ ಸಾಗ ಕಳಿಸಿತು.

ಆದರೆ, ಶಾಮರಾಯರು ತಮ್ಮ ಕಲ್ಪನಾ ರಾಜ್ಯದಲ್ಲಿ ಒಂದು ಭವ್ಯವಾದ ಅರಮನೆಯನ್ನು ಕಟ್ಟಿ ಮುಗಿಸಿ, ತಾವು ಬದುಕಿದ್ದಷ್ಟು ಕಾಲವೂ ಅದರಲ್ಲಿ ತಮ್ಮ ಹೆಂಡತಿ ಮಕ್ಕಳೊಂದಿಗೆ ಸುಖವಾಸ ಮಾಡಿರಬೇಕು. ಅವರು ಬದುಕಿರುವಂದೇ ಅವರು ಕಟ್ಟತೊಡಗಿದ್ದ 'ಅರಮನೆ' ಮುಗಿದಿದ್ದರೆ, ಅವರ ಕಲ್ಪನೆಯ 'ಅರಮನೆ'ಗೆ ತಾವು ಕಟ್ಟಿದ ಮನೆ ಸರಿತೂಗದೆಂದು ಅವರೇ ಹೇಳುತ್ತಿದ್ದರೋ ಏನೋ. ಮಾನವನ ಬಯಕೆಯೆಲ್ಲ ಬಯಸಿದಂತೆಯೇ ಈಡೇರಿದರೆ ಬಾಳಿನ ಮೋಹಕತೆಯಾದರೂ ಏನು ? ನಮ್ಮ ಗೈಮೆಗಳೆಲ್ಲ ನಾವು ಕಟ್ಟುವ 'ಅರಮನೆ'ಗಳ, 'ಗಾಳಿಗೋಪುರ'ಗಳ, ಕೇವಲ ಸ್ಥೂಲವಾದ ನಕ್ಷೆ ಮಾತ್ರ. ದೈವಸೃಷ್ಟಿ ಈಗ ಪೂರ್ಣಗೊಂಡಿದೆಯೆಂದು ಹೇಳಬಲ್ಲವರಾರು ? ಇದು ಇನ್ನೂ ವಿಕಾಸದ ಹಾದಿಯಲ್ಲೇ ಇದೆ. ಇನ್ನು ಮಾನವನ ಯಾವ ಗೈಮೆಗೆ ತಾನೆ ಪೂರ್ಣತೆಯೆಲ್ಲಿ ಬಂದೀತು ? ಏನೂ ಕಟ್ಟದೆ ಇರುವುದಕ್ಕಿಂತ ಅರೆಮನೆಯಾದರೂ ಕಟ್ಟುವುದು ಲೇಸೆಂದು ನನ್ನ ಭಾವನೆ. ಕಳಪೆಯ ನಾಟಕ ಸಂಘವಾದರೂ ಸರಿಯೆ, ಶಾಮರಾಯರು ರಾಜಾಪಾರ್ಟು ಮಾಡಿಯೇ ಮಾಡಿದರು ; ಸಾಯುವಂದು ಅರೆಮನೆಯಾಗಿ ಉಳಿದರೂ ಸರಿಯೆ, ಅವರು ಕಟ್ಟಿದ ಮನೆ ಅರಮನೆಯೇ ಸರಿ. ನೆರೆಹೊರೆಯವರ ನೆನಪಿನಲ್ಲಿ ಶಾಮರಾಯರು ಇಂದಿಗೂ 'ಅರಮನೆ ಶಾಮರಾಯರು' ; ಈ ಹೆಸರು ಅವರ ಸಾಹಸ ಬುದ್ಧಿಗೆ ಸ್ಮಾರಕ ಎಂದು ನನ್ನ ಎಣಿಕೆ.

ಅರೆಯಾಗಿದ್ದ ಶಾಮರಾಯರ ಮನೆ ಅವರು ಬಿಟ್ಟುಹೋದ ಸಾಲದ ಹೊರೆಯಿಂದಾಗಿ ಅವರ ಹೆಂಡತಿ ಮಕ್ಕಳ ಪಾಲಿಗೆ ಉಳಿಯಲಿಲ್ಲವಾದರೂ, ಅವರಿಗೆ ನಷ್ಟವೇನೂ ಆಗಲಿಲ್ಲ. ಯಾರೋ ಅರಸಿನವರು ಅದನ್ನು ಕೊಂಡು ಈಗ ಪೂರ್ತಿಯಾಗಿ ಕಟ್ಟಿಸಿದ್ದಾರೆ. ಮನೆ ಚೆನ್ನಾಗಿಯೂ ಇದೆ ; ಮೂರು ಅಂತಸ್ತಿನ ಮನೆ. "ಶಾಮರಾಯರ ಮನೆ ಒಳ್ಳೇ ಅರಮನೆಯೇ ಆಯಿತು.

ಹೀಗಾದರೂ ಅವರ ಇಷ್ಟ ನೆರವೇರಿತಲ್ಲ" ಎಂದು ಸುಬ್ಬಣ್ಣನವರು ಆಗಾಗ್ಗೆ ಹೇಳುತ್ತಲೇ ಇದ್ದರು. ಈಗಲೂ ಆ ಮನೆಯನ್ನು ನಿರ್ದೇಶಿಸುವಾಗ 'ಶಾಮ ರಾಯರ ಮನೆ' ಎಂದೇ ನೆರೆಹೊರೆಯ ಜನ ಹೇಳುತ್ತಾರೆ. ಸಬ್ ರಿಜಿಸ್ಟ್ರಾರ್ ಅವರ ಕಚೇರಿಯ ಖಾತೆಯಲ್ಲಿ ಮನೆಯನ್ನು ಕೊಂಡವರ ಹೆಸರು ಉಲ್ಲೇಖ ವಾಗಿದೆಯಾದರೂ, ಜನದ ಮನಸ್ಸಿನ ಖಾತೆಯಲ್ಲಿ ಶಾಮರಾಯರ ಹೆಸರೇ ಇನ್ನೂ ನೆಲಸಿದೆ. ಬೀದಿಯ ಹಳೆಯ ತಲೆಗಳೆಲ್ಲ ಬಿದ್ದು ಹೋದಂದು ಖಾತೆ ಬದಲಾವಣೆಯಾಗಬಹುದು !

# ಭಿಕ್ಷಾನ್ನದ ಭಾಗೀರಥಮ್ಮ

## ೧

ಭಿಕ್ಷಾನ್ನದ ಭಾಗೀರಥಮ್ಮ! ಹೆಸರು ಕೇಳಿ ನಿಮಗೆ ಆಶ್ಚರ್ಯವಾಗ ಬಹುದಲ್ಲವೆ ? ಆಶ್ಚರ್ಯವೇನಿಲ್ಲ. ಅಪೂರ್ವದ ಹೆಸರು. ಅಂತೆಯೇ ಅಪೂರ್ವದ ವ್ಯಕ್ತಿ. ನ ಭೂತೋ ನ ಭವಿಷ್ಯತಿ.

ಹಲವು ವರ್ಷಗಳ ಹಿಂದೆ ಬೆಂಗಳೂರು ಮೈಸೂರಿನಂಥ ಪಟ್ಟಣಗಳಲ್ಲಿ ಭಿಕ್ಷಾನ್ನವೆತ್ತಲು ಬೀದಿ ಬೀದಿ ಅಲೆಯುತ್ತಿದ್ದ ಬ್ರಾಹ್ಮಣ ವಿದ್ಯಾರ್ಥಿಗಳ ಪಡೆಯನ್ನೇ ಕಾಣಬಹುದಾಗಿತ್ತು. ಈಚೆಗೆ ಅವರ ಸಂಖ್ಯೆ ಬಹುಮಟ್ಟಿಗೆ ಕಡಮೆಯಾಗಿದೆ. ಏಕೆ ಹೀಗಾಯಿತು, ಹೀಗಾದದ್ದು ಒಳ್ಳೆಯದೆ ಕೆಟ್ಟದ್ದೆ, ಇದು ಬಡ ಬ್ರಾಹ್ಮಣ ವಿದ್ಯಾರ್ಥಿಗಳ ಆರ್ಥಿಕ ಅಭಿವೃದ್ಧಿಯನ್ನು ಸೂಚಿಸುತ್ತದೆಯೇ ಇಲ್ಲವೆ 'ಬ್ರಾಹ್ಮಣಿಕೆ'ಯ ಅಧೋಗತಿಯನ್ನು ಸೂಚಿಸುತ್ತದೆಯೆ—ಈ ಕಾರಣಮೀಮಾಂಸೆಯ ಕುಲಗೋತ್ರ ವಿಚಾರ ಭಾಗೀರಥಮ್ಮನ ಕಥೆಯಲ್ಲಿ ಅಪ್ರಕೃತ. ಆದರೂ ಇಷ್ಟು ಹೇಳಬೇಕು : ಪ್ರಾಚೀನ ಸಂಪ್ರದಾಯದ ಮೇರೆಗೆ, ಬಡವ ಬಲ್ಲಿದನೆಂಬ ಭೇದವಿಲ್ಲದೆ ದ್ವಿಜ ಬ್ರಹ್ಮಚಾರಿಗಳು ತಮ್ಮ ವಿದ್ಯಾರ್ಥಿದಶೆಯಲ್ಲಿ ಭಿಕ್ಷಾನ್ನವೆತ್ತಿಯೇ ವಿದ್ಯಾವ್ಯಾಸಂಗ ಮಾಡಬೇಕಾಗಿದ್ದಿತು. ಒಂದಾನೊಂದು ಕಾಲದಲ್ಲಿ, ಕರ್ತವ್ಯ ಕರ್ಮವಾಗಿದ್ದ ಈ ಸಂಪ್ರದಾಯದ ಅವಶೇಷದ ನಾಟಕವನ್ನು ಈಗಲೂ ಉಪನಯನ ಕಾಲದಲ್ಲಿ ನೋಡಬಹುದು.* ಕಾಲಕ್ರಮದಲ್ಲಿ 'ಭವತಿ ಭಿಕ್ಷಾಂ ದೇಹಿ' ಎಂಬ ಪವಿತ್ರ

---

* ಜವಹರಲಾಲ್ ನೆಹರು ಕೂಡ ಈ ನಾಟಕದಲ್ಲಿ ಪಾತ್ರವಹಿಸಿದ್ದಾರೆ; ಬಾಲ ಬ್ರಹ್ಮಚಾರಿ ನೆಹರೂ ಅವರ ಚಿತ್ರ ಈಚೆಗೆ ಪ್ರಕಟವಾದದ್ದನ್ನು ಕೆಲವರು ನೋಡಿರಬಹುದು.

ಮಂತ್ರವು ಕೇವಲ ಬಡ ಬ್ರಾಹ್ಮಣ ವಿದ್ಯಾರ್ಥಿಗಳ ಲಾಂಛನವಾಯಿತು. ಗಾಯತ್ರೀ ಮಂತ್ರೋಪದೇಶವಾಗಿರದಿದ್ದರೂ, ಅಥವಾ ಆಗಿ ಅದನ್ನು ಮರೆತಿದ್ದರೂ, ಈ 'ಭವತಿ ಭಿಕ್ಷಾಂ ದೇಹಿ' ಮಂತ್ರದ ಉಪದೇಶವನ್ನು ಯಾರಿಂದಲೂ ಪಡೆಯದೆ ನಿತ್ಯ ಎರಡು ಹೊತ್ತೂ ಆ ಮಂತ್ರವನ್ನು ಜಪಿಸುವುದು ಅನೇಕರ ಅಪರಿಹಾರ್ಯ ಕರ್ಮವಾಗಿತ್ತು. ಈ ಅವಶ್ಯ ಕರ್ಮವನ್ನು, ವಿದ್ಯೆ ಗಳಿಸುವುದಕ್ಕಾಗಿ ಬಡ ವಿದ್ಯಾರ್ಥಿಗಳು ಮಾಡುತ್ತಿದ್ದ ಕರ್ಮವನ್ನು, ಜೀವ ಉಳಿಸಿಕೊಂಡಿರುವುದಕ್ಕಾಗಿ ಒಬ್ಬ ಗೃಹಿಣಿ ಎನ್ನಿಸಿಕೊಂಡಿದ್ದಾಕೆ ಮಾಡಬೇಕಾಯಿತು.

ಭಾಗೀರಥಮ್ಮನ ಭಾಗಕ್ಕೂ ಈ ಮಂತ್ರಪಠನೆ ಅವಶ್ಯ ಕರ್ಮವಾಗಿ ಪರಿಣಮಿಸಿದ ಸಂಗತಿ 'ವಿಧಿವಿಲಾಸ ನಾಟಕ ಮಂಡಲಿ'ಯ ಒಂದು ದುರಂತ ನಾಟಕ. ಈ ನಾಟಕ ನಡೆದದ್ದು ನಮ್ಮ ಬೀದಿಯಲ್ಲಿ—ಮೈಸೂರಿನಲ್ಲಿ. ನಾನು ಹುಡುಗನಾಗಿದ್ದಂದು ಈ ನಾಟಕದ ಕಡೆಯ ಅಂಕವನ್ನು ನೋಡಿದೆ. ಯಾರೂ ಈ ನಾಟಕವನ್ನು ಸಂಪೂರ್ಣವಾಗಿ ನೋಡಿದವರಿಲ್ಲ. ಒಬ್ಬೊಬ್ಬರು ಒಂದೊಂದು ದೃಶ್ಯ, ಒಂದೊಂದು ಅಂಕ ನೋಡಿರಬಹುದು, ಅಷ್ಟೆ. ಅವರು ಇವರು ಕಂಡ ನೋಟಗಳ ಕೇಳಿಕೆಯ ಅನುಭವದ ಜೊತೆಗೆ ನಾನು ಕಂಡ ನೋಟದ ಅನುಭವವೂ ಕೂಡಿಕೊಂಡು, ಈ ನಾಟಕ ಎಷ್ಟೋ ವೇಳೆ ನನ್ನ ಮನೋರಂಗಭೂಮಿಯಲ್ಲಿ ನಡೆದು, ನನ್ನ ಕಣ್ಣಿಗೆ ನೀರು ತಂದಿದೆ.

ನೀವೇ ಹೇಳಿ, ಯಾರ ಕಣ್ಣಿಗೆ ತಾನೇ ನೀರು ತರುವುದಿಲ್ಲ ? ಅರುವತ್ತು ವರ್ಷದ ಮುದುಕಿ ; ಮುತ್ತೈದೆ! ವಾತರೋಗದಿಂದ ಕಾಲುಕೀಲೆಲ್ಲ ನೋವು ; ಕಾಲು ನಡುಕ, ಕೈ ನಡುಕ, ದೃಷ್ಟಿ ಮಂದ. ಜಾಲ ಸೀರೆ, ಜೂಲು ಕುಪ್ಪಸ. ಒಂದು ಕೈಯಲ್ಲಿ ಕೋಲು, ಇನ್ನೊಂದು ಕೈಯಲ್ಲಿ ಡಬ್ಬ—ಹೌದು, ಡಬ್ಬ ; ಹಿಡಿಯುಳ್ಳ ದೊಡ್ಡ ತವರದ ಡಬ್ಬ. ಒಂದು ಕಡೆ ನಾಯಿಯ ಕಾಟ, ಇನ್ನೊಂದು ಕಡೆ ಏನೂ ಅರಿಯದ ತುಂಟ ಹುಡುಗರ ಕಾಟ. (ನಾನೂ ಈ ಹುಡುಗರ ಪಡೆಯಲ್ಲಿ ಸೇರಿದ್ದೆ ಎಂದು ನನ್ನ ತಾಯಿ ನನಗೆ ಆಮೇಲೆ ನೆನಪು ಕೊಡುತ್ತಿದ್ದರು ; ನನಗೂ ಹಾಗೆಂದು ಸ್ವಲ್ಪ ಮಟ್ಟಿನ ನೆನಪು.) ಒಂದೊಂದು ದಿನ, ಎಡವಿಬಿದ್ದು ಅನ್ನ ಸಾರು ಚೆಲ್ಲಿಹೋಗುತ್ತಿತ್ತು ; ಕೆಲವೊಮ್ಮೆ ತನ್ನನ್ನು ಬಿಡದೆ ಹಿಂಬಾಲಿಸುತ್ತಿದ್ದ ನಾಯಿ ಮುಟ್ಟಿದಂತೆ ಅವಳಿಗೆ ತೋರಿ, ತಿರಿದುತಂದ ಅನ್ನವೆಲ್ಲ ಅದರ ಪಾಲೇ ಆಗುತ್ತಿತ್ತು ; ಒಂದೊಂದು ಸಲ, ಎಲ್ಲೋ ಮರೆಯಲ್ಲಿ ನಿಂತಿದ್ದು ಯಾವನೋ ತುಂಟಪೋರ ಗುರಿಯಿಟ್ಟು ಅವಳ ಡಬ್ಬಕ್ಕೆ ಕಲ್ಲುಬೀರಿ, ಅದನ್ನು ನೆಲಕ್ಕೆ ಕೆಡವಿ, ಅವಳ ಅಂದಿನ ಆಹಾರ ಮಣ್ಣುಪಾಲು ಆಗುತ್ತಿತ್ತು. ಅಂಥ ದಿನಗಳಲ್ಲಿ ಒಮ್ಮೊಮ್ಮೆ ಅವಳು ನಮ್ಮ ಮನೆಗೆ ಬಂದು ನಮ್ಮ ತಾಯಿ

ಯನ್ನು ಕೂಗಿ ಕರೆದು, ತನ್ನ ಗೋಳು ಹೇಳಿಕೊಂಡು, ಪೂರ್ಣ ಭಿಕ್ಷೆಯನ್ನು ಬೇಡುವಳು. ನಮ್ಮ ತಾಯಿ ಅವಳ ಅರೆಹೊಟ್ಟೆ ತುಂಬುವಷ್ಟಾದರೂ ಅನ್ನ ನೀಡಿ ಕಳಿಸುವರು. ನಮ್ಮ ಮನೆಯಲ್ಲಿ ಪ್ರತಿದಿನವೂ ತಂಗೂಳು ಮಿಗುವ ರೂಢಿ. ತಂಗೂಳಿದ್ದರೂ ಭಾಗೀರಥಮ್ಮನಿಗೆ ಬಿಸಿಯನ್ನವೇ, ಬಿಸಿಯ ಸಾರೇ. "ತಂಗಳನ್ನ ನಮಗೆ, ಭಾಗೀರಥಮ್ಮನಿಗೆ ಬಿಸಿಯನ್ನ. ಅವಳೇನು ಬೀಗಿತ್ತಿಯೆ ?" ಎಂದು ನಮ್ಮ ಗೊಣಗಾಟ. "ಅಯ್ಯೋ ಪಾಪ, ಮುದುಕಿ ತಂಗಳು ತಿಂದರೆ ತಡೆಯುತ್ತದೆಯೆ ?" ಎಂದು ನಮ್ಮ ತಾಯಿ ಮರುಗಿ ನುಡಿದು ನಮಗೆ ಸಮಾಧಾನ ಹೇಳುತ್ತಿದ್ದರು.

ಹೌದು ; ನಾನು ಕಂಡಂತೆ ಭಾಗೀರಥಮ್ಮ ಮುದುಕಿ. ತಲೆ ಬೆಳ್ಳಗಾಗಿತ್ತು ; ಮುಖ ಚೆನ್ನಾಗಿ ಸುಕ್ಕುಗಟ್ಟಿತ್ತು ; ಹಲ್ಲು ಉದುರಿದ್ದುವು ; ಮುಖದಲ್ಲಿ ಲಕ್ಷಣಕ್ಕೆಂದು ಅರಸಿನ ಕುಂಕುಮ ಒಪ್ಪುತ್ತಿದ್ದುವು. ತಲೆಯನ್ನು ಕೂಡ ನಿತ್ಯ ತಾನೇ ಬಾಚಿಕೊಂಡು ಗೇಣುದ್ದದ ಜಡೆ ಹಾಕಿಕೊಳ್ಳುತ್ತಿದ್ದಳು. ಗೌರೀಹಬ್ಬದ ಮೊರದ ಬಾಗಿನಕ್ಕೆ ಇಟ್ಟ ಬಾಚಣಿಗೆ ಒಂದೆರಡನ್ನೂ ಚಿಕ್ಕ ಕನ್ನಡಿಯೊಂದನ್ನೂ ವರ್ಷವರ್ಷವೂ ನಮ್ಮ ತಾಯಿ ಭಾಗೀರಥಮ್ಮನಿಗೆ ದಾನ ಮಾಡುತ್ತಿದ್ದರು. ಈ ಸಲಕರಣೆಗಳಿಂದ ಅವಳ ಕೇಶಪ್ರಸಾಧನ ಕಾರ್ಯ ನಡೆಯುತ್ತಿತ್ತು. ಅವಳು ಮುತ್ತೈದೆಯೆಂಬ ಭಾವನೆಯಿದ್ದಾಗ ನಮ್ಮ ತಾಯಿ ಅವಳಿಗೆ ಮೊರದ ಬಾಗಿನವನ್ನೂ ಕೊಡುತ್ತಿದ್ದರಂತೆ. ಈಗ ಅವಳು ನಮ್ಮ ತಾಯಿಯ ಭಾವನೆಯಲ್ಲಿ (ಮತ್ತು ಬೀದಿಯವರ ಭಾವನೆಯಲ್ಲಿ ಕೂಡ) ಮುತ್ತೈದೆಯಾಗಿರಲಿಲ್ಲ. ಆದರೆ,ತಾನು ಮುತ್ತೈದೆಯೆಂದೇ ಭಾಗೀರಥಮ್ಮನ ಮುಗ್ಧ ಭಾವನೆ. ತನ್ನನ್ನು ಹಿಂದೆ ತೊರೆದು ಹೋದ ಗಂಡ ಇಂದಿಗೂ ಎಲ್ಲಿಯೋ ಬದುಕಿರುವನೆಂದೇ ಅವಳ ಭಾವನೆ. ಹನ್ನೆರಡು ವರ್ಷಗಳ ಮೇಲೆ ಸಂದರೂ ಅವಳ ಗಂಡನ ಸುಳಿವು ಕಾಣದೆ ಹೋದದ್ದರಿಂದ ಅವಳು ಶಾಸ್ತ್ರಪ್ರಕಾರ ಮುತ್ತೈದೆಯಲ್ಲವೆಂದು ನಮ್ಮ ಬೀದಿಯವರ ಸಿದ್ಧಾಂತ. "ನೀವು ಮಡಿ ಹಿಡಿಯಿರಿ, ಭಾಗೀರಥಮ್ಮಾ" ಎಂಬ ನಮ್ಮ ಬೀದಿಯ ಸ್ತ್ರೀಯರೆಲ್ಲರ ಬೋಧೆಯೂ ಅವಳ ಅಚಲವಾದ ನಂಬಿಕೆಯನ್ನು ಕದಲಿಸಲು ಸಮರ್ಥವಾಗಲಿಲ್ಲ. ನಾವು ತಿಳಿದವರೆಂದುಕೊಳ್ಳುವ ಜನಕ್ಕೆ ಶಾಸ್ತ್ರ ಪ್ರಮಾಣ ; ಏನೂ ಅರಿಯದ ಮುಗ್ಧ ಜೀವಕ್ಕೆ ಅಂತಃಕರಣವೇ ಪ್ರಮಾಣ. ಭಾಗೀರಥಮ್ಮ ಸತ್ತೆಂದು ಅವಳ ಗಂಡ ಎಲ್ಲಿಯೋ ಬದುಕಿದ್ದಾನೆಂದೇ ಒಬ್ಬಿಬ್ಬರ ನಂಬಿಕೆ. ಹಾಗೆ ನಂಬಿದ್ದವರಲ್ಲಿ ನಮ್ಮ ಮನೆಯಲ್ಲಿದ್ದ ಗುಮಾಸ್ತೆ ಗುಂಡಪ್ಪ ಒಬ್ಬ.

೨

ಅವಳ ಮುಪ್ಪಿನಲ್ಲಿ ಮಾತ್ರ ಭಾಗೀರಥಮ್ಮನನ್ನು ಚೆನ್ನಾಗಿ ಬಲ್ಲ ನಾನು ಅವಳು ಒಮ್ಮೆ ತಕ್ಕಮಟ್ಟಿಗೆ ಚೆಲುವೆಯಾಗಿದ್ದಳೆಂಬುದನ್ನು ನಂಬಲಾಗುತ್ತಿರ ಲಿಲ್ಲ. ಗಂಡನ ಮನೆಗೆ ಬಂದಾಗಿನಿಂದ ನಮ್ಮ ತಾಯಿ ಅವಳನ್ನು ಚೆನ್ನಾಗಿ ಬಲ್ಲರು. ಅವಳು ತಕ್ಕಮಟ್ಟಿಗೆ ಚೆಲುವೆಯಾಗಿದ್ದಳೆಂದೇ ಅವರ ಹೇಳಿಕೆ. ಗಂಡಿನ ಮನಸ್ಸನ್ನು ಒಲಿಸಿಕೊಳ್ಳಲು ಹೆಣ್ಣಿಗೆ ರೂಪಿನ ಜೊತೆಗೆ ಬೆಡಗು ಬಿನ್ನಾಣ, ಜಾಣ್ಮೆ ವಿವೇಕ, ನಯ ನಾಜೂಕುಗಳೂ ಅಗತ್ಯವೆಂದು ಕಾಣು ತ್ತದೆ. ತಾಯಿ ತಂದೆ ಒಪ್ಪಿ ತಂದುಕೊಂಡ ಹುಡುಗಿ ಭಾಗೀರಥಿ ತನಗೆ ತಕ್ಕ ಹೆಣ್ಣೇ ಎಂದು ಅವಳ ಗಂಡ ಶೇಷಗಿರಿ ಮೊದಮೊದಲು ಭಾವಿಸಿದಂತೆ ತೋರು ತ್ತದೆ. ಶೇಷಗಿರಿ ಆಗಿನ ಕಾಲಕ್ಕೆ ತಕ್ಕಮಟ್ಟಿನ ವಿದ್ಯಾವಂತ ; ಮೆಟ್ರಿಕ್ಯು ಲೇಷನ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ, ಎಂಟ್ರೆನ್ಸ್ ಪರೀಕ್ಷೆಗೆ ಓದುತ್ತಿದ್ದ. ಅವನು ಫಿಫ್ತ್ ಫಾರಂನಲ್ಲಿ ಓದುತ್ತಿದ್ದಾಗಲೇ ಅವನಿಗೆ ಮದುವೆಯಾಯಿತು. ಅನೇಕ ಮಕ್ಕಳನ್ನು ಕಳೆದುಕೊಂಡು ಉಳಿದ ಒಬ್ಬನೇ ಮಗನಾದ ಶೇಷಗಿರಿ ಯನ್ನು ಅವನ ತಾಯಿತಂದೆ ಬಹು ಮುದ್ದಿನಿಂದ ಬೆಳಸಿದ್ದರು. ಅವನು ಬಿ.ಎ., ಪ್ಯಾಸು ಮಾಡಬೇಕೆಂದು ಅವರ ಆಶೆ ; ಅದಕ್ಕಿಂತ ಹೆಚ್ಚಾಗಿ, ತಾವು ಕಣ್ಣು ಮುಚ್ಚಿಕೊಳ್ಳುವ ಮುನ್ನ ಮೊಮ್ಮಗನನ್ನು ಕಾಣಬೇಕೆಂದು ಪ್ರಬಲವಾದ ಇಚ್ಛೆ. ಅದಕ್ಕಾಗಿ, ಶೇಷಗಿರಿ ಎಂಟ್ರೆನ್ಸ್ ತರಗತಿಯಲ್ಲಿದ್ದಾಗಲೇ ಭಾಗೀರಥಿ ಮನೆಗೆ ಬರುವಂತೆ ಏರ್ಪಾಡುಮಾಡಿದರು. ಸೊಸೆ ಮನೆಗೆ ಬಂದಳೆಂದು ಶೇಷಗಿರಿಯ ತಾಯಿತಂದೆಗಳಿಗೆ ಹಿಗ್ಗೋ ಹಿಗ್ಗು. ತಮ್ಮ ಮುದ್ದಿನ ಸೊಸೆ ಮೊದ್ದು ಎಂಬುದು ಪ್ರೇಮಮಯಿಗಳಾದ ತಾಯಿತಂದೆಗಳಿಗೆ ತಿಳಿಯದೆ ಹೋಯಿತು. ಒಬ್ಬಳೇ ಸೊಸೆ ; ಸೊಸೆಯನ್ನು ಕೂರಿಸಿ ಅವಳಿಗೆ ಬಡಿಸುವರು. ಶೇಷಗಿರಿಯ ತಾಯಿ ಭಾಗೀರಥಿಯ ಮೌನವನ್ನು ಲಜ್ಜೆಯೆಂದೂ, ಅಲಂಕಾರ ಬೆಡಗು ಬಿನ್ನಾಣಗಳಲ್ಲಿ ಆಸಕ್ತಿಯಿಲ್ಲದ್ದನ್ನು ಗರತಿಯ ಗುಣವೆಂದೂ, ಪೆದ್ದುತನದಿಂದ ವರ್ತಿಸುತ್ತಿದ್ದುದನ್ನು ನಿಷ್ಕಾಪಟ್ಯವೆಂದೂ, ಮನೆಗೆ ಬಂದ ವರ್ಷದಲ್ಲಿಯೇ ಮಗ ಎಂಟ್ರೆನ್ಸ್ ಪರೀಕ್ಷೆಯಲ್ಲಿ ಫೇಲಾದರೂ ಒಡನೆಯೇ ಅವನಿಗೆ ಮ್ಯುನಿಸಿಪಾಲಿಟಿ ಯಲ್ಲಿ ಗುಮಾಸ್ತೆಯ ಹುದ್ದೆ ದೊರೆತದ್ದರಿಂದ ಅವಳು ಭಾಗ್ಯಲಕ್ಷ್ಮಿಯೇ ಎಂದೂ ಆಕೆ ಭಾವಿಸತೊಡಗಿದರು. ಸೊಸೆಗೆ ಮನೆಗೆಲಸ ಬರುತ್ತದೆಯೇ ಇಲ್ಲವೆ ಎಂದು ತಿಳಿಯುವುದಕ್ಕೆ ಅವಕಾಶವೇ ಇರಲಿಲ್ಲ ; ಏಕೆಂದರೆ, ಮಾಡಲು ಯಾವ ಕೆಲಸವನ್ನೂ ಸೊಸೆಗೆ ಬಿಡುತ್ತಲೇ ಇರಲಿಲ್ಲ. ಆದರೆ, ಶೇಷಗಿರಿಗೆ ತಾನೊಂದು

ನೊದ್ದು ಹೆಣ್ಣನ್ನು ಮದುವೆಯಾಗಿದ್ದೇನೆಂದು ಅರಿತುಕೊಳ್ಳಲು ಬಹಳ ಕಾಲ ಬೇಕಾಗಲಿಲ್ಲ. ವೃದ್ಧಾಪ್ಯದಲ್ಲಿದ್ದ ತನ್ನ ತಾಯಿತಂದೆಗಳು ತನ್ನ ಹೆಂಡತಿಯ ವಿಷಯವಾಗಿ ಹೊಂದಿದ್ದ ಭ್ರಾಂತಿ ಜನ್ಯವಾದ ಬಂಧುರ ಭಾವವನ್ನು ಒಡೆಯಲು ಯತ್ನಮಾಡಲಿಲ್ಲ; ಅದೇ ಅವರ ಅಂತ್ಯಕಾಲದ ಅಪರಿಮಿತಾನಂದವಾಗಿದ್ದಿತು. ಅವರ ಆನಂದವನ್ನು ಅಪಹರಿಸಲು ತನಗೆ ಹಕ್ಕಿಲ್ಲವೆಂದುಕೊಂಡನವನು. ತನ್ನ ಆನಂದವೋ, ತನ್ನ ಸುಖವೋ? ಅದನ್ನು ಸಾಧಿಸಿಕೊಳ್ಳಲು ಹಲವು ಮಾರ್ಗ ವುಂಟು, ಸದ್ಯಕ್ಕೆ ತಾಳ್ಮೆಯಿಂದ ಇರುವುದೊಳ್ಳಿತು ಎಂದು ಶೇಷಗಿರಿ ತನ್ನಲ್ಲಿ ತಾನು ಸಮಾಧಾನಗೊಂಡನು. ಅವನು ತಾನೆ ಏನು ಮಾಡಿಯಾನು? ತಾನು ಪತ್ನಿ ಎಂಬ ಭಾವನೆ ಬರಲು ಅವಕಾಶಕೊಡದೆ ಪಶು ಎಂಬ ಭಾವನೆ ಬರುವಂತೆ ನಡೆದುಕೊಳ್ಳುತ್ತಿದ್ದಳು ಭಾಗೀರಥಿ. ಇದು ಅವಳ ತಪ್ಪೊ ಅಲ್ಲ; ಅವಳನ್ನು ಹಾಗೆ ಸೃಷ್ಟಿಮಾಡಿದ್ದ ಬ್ರಹ್ಮನ ತಪ್ಪು. ಹೆಸರಿಗೆ ಗಂಡಹೆಂಡಿರೆಂದು ಒಂದು ಕಡೆ ಮಲಗುತ್ತಿದ್ದರೇ ಹೊರತು, ಕೇವಲ ಅತ್ಯಲ್ಪ ಕಾಲದೊಳಗೆ ದಾಂಪತ್ಯ ಶಯ್ಯೆಯಲ್ಲಿ ಪಾಲುಗೊಳ್ಳಲೂ ಶೇಷಗಿರಿಗೆ ಬೇಡವೆನ್ನಿಸಿತು. ಮೊಮ್ಮಗುವನ್ನು ಕಾಣದೆಯೇ ಶೇಷಗಿರಿಯ ತಾಯಿ ಸೊಸೆಯನ್ನು ಹರಸುತ್ತ ಒಂದು ದಿನ ಕಣ್ಣುಮುಚ್ಚಿಕೊಂಡರು; ಪಾರ್ಶ್ವವಾಯು ತಗುಲಿ ಸತ್ತರು.

ಹೆಂಡತಿ ತೀರಿಹೋದಮೇಲೆ ಶೇಷಗಿರಿಯ ತಂದೆಗೆ ತನ್ನ ಸೊಸೆಯ ಸ್ವಭಾವ ಒಂದು ಭಾಗದಲ್ಲಿ ಸಂಪೂರ್ಣವಾಗಿ ಮನದಟ್ಟಾಯಿತು. ಭಾಗೀರಥಿ ಈಗ ವಾಸ್ತವವಾಗಿ ಗೃಹಿಣಿಯಾದಳು; ಆದರೆ ಗೃಹಿಣಿಯ ಕರ್ತವ್ಯಭಾರವನ್ನು ಅವಳು ವಹಿಸಲಾರದವಳಾಗಿದ್ದಳೆಂಬುದು ತಂದೆ ಮಕ್ಕಳಿಗೆ ಕ್ರಮೇಣ ಅರಿವಿಗೆ ಬಂದಿತು. ಅಂಗಡಿಯಿಂದ ತಂದ ಸಾಮಾನುಗಳನ್ನು ಒಪ್ಪವಾಗಿ ಇಡಲು ಬರದು; ಮನೆಯನ್ನು ಸಾರಿಸಿ ಗುಡಿಸಿ, ರಂಗೋಲಿಯಿಡಲು ಬರದು. ಅವಳು ಮಾಡಿದ ಅಡಿಗೆಯನ್ನು ರುಚಿನೋಡುವ ಅವಕಾಶ ಕೂಡ ತಂದೆಮಕ್ಕಳಿಗೆ ಒದಗಿ ಬರಲಿಲ್ಲ. ಅಡಿಗೆಯ ಭಾರ ಬಿದ್ದ ಮೊದಲ ದಿನವೇ ಅನ್ನ ತಳವೆಲ್ಲ ಸೀದು ತಪ್ಪಲೆಗೆಲ್ಲ ಒಂದು ಮುದ್ದೆಯಾಗಿ ಕುಳಿತಿತ್ತು; ಸಾರಿನಲ್ಲಿ ಉಪ್ಪೊಂದು ಕರಗಿತ್ತೇ ಹೊರತು, ಬೇಳೆಯ ಕಾಳು ಮೆಣಸಿನಪುಡಿ ಹುಣಿಸೆಹಣ್ಣು ಎಲ್ಲವೂ ಬೇರೆ ಬೇರೆಯಾಗಿ ಸ್ವಸ್ವರೂಪದಲ್ಲಿ ದೊರೆಯುವಂತಿದ್ದುವು. ಆ ಹೊತ್ತು ಶೇಷಗಿರಿ ಹೆಂಡತಿಯನ್ನು ಸಿಕ್ಕಾಬಟ್ಟೆ ಬೈದು ಉಪವಾಸಮಾಡಿ ಕಚೇರಿಗೆ ಹೊರಟ. ಅವನ ತಂದೆ ತಾವೇ ಮತ್ತೆ ಅಡಿಗೆ ಮಾಡಿ ಸೊಸೆಗೂ ಬಡಿಸಿ, ತಾವು ಅನ್ನ ಕಾದುವ ಹೊತ್ತಿಗೆ ಅಪರಾಹ್ನ ಮೂರಾಗಿತ್ತು. ಮಾವ ಬಹಳ ಮೃದುವಾಗಿ, "ಗಂಡ ಬೈದ ಅಂತ ಏನೂ ತಿಳಿದುಕೊಳ್ಳಬೇಡವಮ್ಮ. ಹೆಂಗಸಿಗೆ ಏನು

ಬರದೆ ಇದ್ದರೂ ಮುಖ್ಯವಾಗಿ ಅಡಿಗೆ ಮಾಡುವುದು ಚೆನ್ನಾಗಿ ಬಂದಿರಬೇಕು. ಮಾಡುತ್ತ ಮಾಡುತ್ತ ಬರುತ್ತದೆ. ಅವಳೂ ನಿನಗೆ ಏನೂ ಕಲಿಸಲಿಲ್ಲ. ನಾಳೆಯಿಂದ ನಾನಾದರೂ ಕಲಿಸುತ್ತೇನೆ" ಎಂದು ಸೊಸೆಗೆ ಸಮಾಧಾನದ ಮಾತು ಗಳನ್ನಾಡಿದರು. ಗಂಡನ ಬೈಗುಳಿಂದ ಭಾಗೀರಥಿಗೆ ಕೋಪವಾಗಲಿ ದುಃಖ ವಾಗಲಿ ಉಂಟಾಗಿರಲಿಲ್ಲ; ಮಾವನ ಮಾತುಗಳು ಮನಸ್ಸಿಗೆ ಹೊಗಲೇ ಇಲ್ಲ. ಅಂತೂ ತನಗೆ ಅಡಿಗೆ ಮಾಡುವುದಕ್ಕೆ ಬರುವುದಿಲ್ಲ ಎಂಬ ಒಂದು ಸಂಗತಿ ಸ್ಪಷ್ಟವಾಯಿತು; ತಾನೇ ಮಾಡಬೇಕೆಂಬುದನ್ನೂ ಗ್ರಹಿಸಿಕೊಂಡಳು. ಮಾರನೆಯ ದಿನ ಅಡಿಗೆಯ ಕಾರ್ಯದಲ್ಲಿ ಮಾವನವರು ನೆರವಿಗೆಂದು ಹೋಗಿ ಸಂಪೂರ್ಣ ವಾಗಿ ಒಲೆಯ ಮುಂದೆ ಕೂರಬೇಕಾಯಿತು. ಒಗ್ಗರಣೆ ಹಾಕುವ ಸಮಯದಲ್ಲಿ "ಒಗ್ಗರಣೆ ಆದ ಕೂಡಲೆ ಸಾರಿಗೆ ಹಾಕಿಬಿಡಮ್ಮ. ನಾನು ಸ್ವಲ್ಪ ಕೈಕಾಲು ತೊಳೆದುಕೊಂಡು ಬರುತ್ತೇನೆ" ಎಂದು ಹೇಳಿ ಮಾವನವರು ಹಿತ್ತಲಕಡೆ ಹೊರಟರು. ಒಲೆಯಲ್ಲಿದ್ದ ಒಗ್ಗರಣೆಯ ಸೌಟಿನ ತುಪ್ಪ ಉರಿತಾಕಿ ಭಗ್ಗನೆ ಹೊತ್ತಿಕೊಂಡಿತು. ಅವ್ವಳಿಸುವ ಉರಿಯ ಜ್ವಾಲೆ ಹತ್ತಿರದಲ್ಲಿಯೇ ಕುಳಿ ತಿದ್ದ ಭಾಗೀರಥಿಯ ಸೀರೆಯ ತುದಿಗೆ ತಾಕಿ, ಸಿರೆ ಹೊತ್ತಿಕೊಂಡಿತು. ಅವಳಿಗೆ ಏನು ಮಾಡುವುದಕ್ಕೂ ತೋರಲಿಲ್ಲ. ಆದರೆ ಆ ವಿಪತ್ಸಮಯದಲ್ಲಿ ಕಿರಚಿ ಕೊಳ್ಳುವ ಮಟ್ಟಿಗೆ ಒಂದು ಪ್ರಾಣಿಮಾತ್ರದವಳಾಗಿದ್ದಳು; ಕಿರಚಿಕೊಂಡಳು. ಅವಳ ಮಾವನವರು ಓಡಿಬಂದು ಸೀರೆ ಹೊತ್ತಿಕೊಂಡು ಬೆಂದುಹೋಗುವುದ ರಲ್ಲಿದ್ದ ಸೊಸೆಯನ್ನು ಕಂಡು, ತಕ್ಷಣ ರಂಗೋಲಿ ತುಂಬಿದ್ದ ದೊಡ್ಡ ಡಬ್ಬ ವನ್ನು ತಂದು, ಸೊಸೆಯನ್ನು ಕುಕ್ಕರಿಸುವಂತೆ ಮಾಡಿ, ಅವಳ ಮೇಲೆ ರಂಗೋಲಿ ಯನ್ನು ಚೆನ್ನಾಗಿ ಸುರಿದರು. ಅಷ್ಟು ಹೊತ್ತಿಗೆ ಹೊರಕ್ಕೆ ಹೋಗಿದ್ದ ಶೇಷಗಿರಿ ಬಂದು ಈ ದೃಶ್ಯವನ್ನು ನೋಡಿ, "ಇವಳು ಸುಟ್ಟುಹೋಗಿ ಸತ್ತುಹೋಗಿದ್ದರೆ ಒಂದು ಪೀಡೆಯೇ ತೊಲಗುತ್ತಿತ್ತು. ನೀವೇಕೆ ಸುಮ್ಮನೆ ಇರಲಾರದೆ ಇವಳನ್ನು ಬದುಕಿಸಹೋದಿರಿ ?" ಎಂದು ಜುಗುಪ್ಸೆಯಿಂದಲೂ ರೋಷದಿಂದಲೂ ಗುಡುಗಿ ದನು. ಮಗನ ಬಾಯಿಂದ ಹೀಗೆ ಇಂಥ ಅವಾಚ್ಯ ಶಬ್ದಗಳು ಹೊರಡಲು ಕಾರಣವೇನಿದ್ದಿರಬಹುದೆಂದು ತಂದೆಯ ಮನಸ್ಸಿಗೆ ಸ್ಪಷ್ಟವಾಗಿರಬೇಕು. ಅವರು ಶಾಂತ ಚಿತ್ತರಾಗಿಯೇ ಮಗನಿಗೆ ಹೇಳಿದರು: "ಅಪ್ಪ, ಪ್ರಾಣಿಮಾತ್ರವನ್ನು ಕಾಪಾಡಬೇಕಾದ್ದು ಧರ್ಮವಪ್ಪ. ಇದನ್ನು ಚೆನ್ನಾಗಿ ನೆನಪಿನಲ್ಲಿಟ್ಟುಕೊ. ಇಹಕ್ಕೂ ಪರಕ್ಕೂ ಇದು ಶ್ರೇಯಸ್ಸು, ಅದಕ್ಕಿಂತ ಹೆಚ್ಚಿನದೇನು ಬೇಕು?" ಆಗ ಆಡದೆ ಉಳಿಸಿಕೊಂಡ ಮಾತನ್ನು ಇನ್ನೊಮ್ಮೆ ಮಗನಿಗೆ ಹೇಳಿದರು: "ಮಗೂ, ಮುಖ್ಯ ನಾನು ಮೋಸಹೋದೆ. ನಿನ್ನ ತಪ್ಪೇನೂ ಇಲ್ಲ. ಬೇಕಾದರೆ

ನೀನು ಇನ್ನೊಂದು ಮದುವೆಮಾಡಿಕೊ. ನನ್ನ ಅಭ್ಯಂತರವೇನೂ ಇಲ್ಲ. ಆದರೆ, ಇವಳನ್ನೂ ಕಾಪಾಡಿಕೊಳ್ಳಬೇಕಾದ್ದು ನಿನ್ನ ಧರ್ಮ." ಅದಕ್ಕೆ ಶೇಷಗಿರಿ, "ಯಾಕೆ? ಈಗ ಇವಳನ್ನು ಕಟ್ಟಿಕೊಂಡು ಇವಳು ಬೇಯುವುದನ್ನು ತಪ್ಪಿಸಿ ನಾವೇ ಬೇಯಿಸಿಕೊಳ್ಳುವ ಸ್ಥಿತಿಗೆ ಬಂದಿದ್ದೇವೆ; ನಾನು ಇನ್ನೊಂದು ಮದುವೆ ಮಾಡಿಕೊಂಡರೆ ನಾವೇ ಬೆಂದುಹೋಗುತ್ತೇವೆ. ಜಾಣೆಯಾದವಳನ್ನು ಕಟ್ಟಿ ಕೊಂಡರೆ ನಿಜವಾಗಿಯೂ ಈ ಮೊದ್ದಿಗೆ ಕೂರಿಸಿ ಬಡಿಸುತ್ತಾಳೆಯೆ? ಅದೆಲ್ಲಾ ಆಗದ ಹೋಗದ ಮಾತು. ನಮ್ಮ ಹಣೆಯಬರಹ ಹೀಗಿತ್ತು; ಅನುಭವಿ ಸೋಣ" ಎಂದು ಉತ್ತರಕೊಟ್ಟನು. ಅಂತೂ, ಮಾರನೆಯ ದಿನದಿಂದಲೇ ಸಂಪೂರ್ಣ 'ನಳಪಾಕ'ಕ್ಕೆ ಪ್ರಾರಂಭವಾಯಿತು; ಶೇಷಗಿರಿಯ ತಂದೆ ಒಲೆಯ ಮುಂದೆ ಕುಳಿತಿರುತ್ತಿದ್ದರು; ಅವನು ಶ್ರಮಸಾಧ್ಯವಾದ ಸುತ್ತುಗೆಲಸಗಳನ್ನೆಲ್ಲ ಮಾಡುತ್ತಿದ್ದನು. ಕೆಲವು ಕಾಲ ಕುಳಿತು ಉಣ್ಣುವ ಭಾಗ್ಯವನ್ನು ಪಡೆದಿದ್ದಳು ಭಾಗೀರಥಮ್ಮ.

೩

ಹೀಗೆ ಕೆಲವು ಕಾಲ ಕಳೆಯಿತು. ಇದ್ದಕ್ಕಿದ್ದ ಹಾಗೆ 'ನಳ ಮಹಾರಾಯ' ತನ್ನ 'ದಮಯಂತಿ'ಯನ್ನು ಬಿಟ್ಟು ಹೋಗುವ ಪ್ರಸಂಗವೊದಗಿತು.

ನೆರೆಮನೆಯ ವೆಂಕಟರಾಯರ ಮನೆಗೆ ಅವರ ತಮ್ಮನ ಮಗಳು, ವಿಧವೆಯಾದ ತರುಣಿ, ಇಂಗ್ಲಿಷ್ ವಿದ್ಯಾಭ್ಯಾಸ ಮಾಡಿ ಶಾಲಾ ಉಪಾಧ್ಯಾಯಿನಿ ಯಾಗಿ ಸ್ವಾವಲಂಬಿಯಾಗುವ ಉದ್ದೇಶದಿಂದ ಬಂದಿದ್ದಳು. ಅವಳ ಹೆಸರು ಸುಭದ್ರೆ. ಚೆಲುವೆ, ಜಾಣೆ; ವಿದ್ಯಾಭ್ಯಾಸದ ಕೆಲವು ಮೆಟ್ಟಿಲುಗಳನ್ನು ಹತ್ತಿದ್ದ ಅವಳ ಮನಸ್ಸು ಸುಸಂಸ್ಕೃತವಾಗಿತ್ತು. ಚೆನ್ನಾಗಿ ಹಾಡು ಹೇಳುತ್ತಿದ್ದಳು. ಸುಭದ್ರೆಯ ಸುಮನೋಹರ ಕಂಠರೂಪಗಳು ಶೇಷಗಿರಿಯ ತೆರಪಾಗಿದ್ದ ಹೃದಯ ಮನಸ್ಸುಗಳನ್ನು ತುಂಬಿದುವು. ಇವಳು ವಿಧವೆಯಾಗಿಲ್ಲದೆ ಹೋಗಿದ್ದರೆ ತಾನು ಇವಳನ್ನು ಮದುವೆಯಾಗಿ ಸುಖವಾಗಿದ್ದಿರಬಹುದಾಗಿದ್ದಿತಲ್ಲವೆ ಎಂಬ ದಾಹಕ ಪ್ರಶ್ನೆ ಅವನ ಮನಸ್ಸನ್ನು ಕಾಡತೊಡಗಿತು. ಮದುವೆಯಾಗದಿದ್ದರೂ ಆ ಸುಖವನ್ನು ಪಡೆಯಲು ಸಾಧ್ಯವಿಲ್ಲವೆ? ವಿಧಿಯಿಂದ ವಂಚಿತನಾದ ತಾನು ಆ ಸುಖವನ್ನು ಪಡೆದು ತನ್ನಂತೆಯೇ ವಂಚಿತಳಾದ ಸುಭದ್ರೆಗೂ ಆ ಸುಖವನ್ನು

ನೀಡಿದರೆ ಅದರಲ್ಲಿ ತಪ್ಪೇನು ಎಂಬ ಮೋಹಕ ಪ್ರಶ್ನೆ ಅವನ ಹೃದಯವನ್ನು ಸೆಳೆಯತೊಡಗಿತು. ಇಂಥ ಸಂದರ್ಭಗಳಲ್ಲಿ ಉದ್ದೇಶಸಾಧನೆಗಾಗಿ ಹೇಗೆ ಮುಂದು ವರಿಯಬೇಕೆಂಬ ಸಮಸ್ಯೆಯಲ್ಲಿ ಸಿಕ್ಕಿ ತೊಳಲುವ ಹೃದಯಕ್ಕೆ ಮನಸ್ಸು ಅದು ಹೇಗೋ ದಾರಿ ತೋರಿಸಿಕೊಡುತ್ತದೆ. ಸುಭದ್ರೆ ತಮ್ಮ ಮನೆಯ ಜಗಲಿಯ ಮೇಲೆ ನಿಂತಿರುವಂದು, ಶಾಲೆಗೆ ಹೋಗುವಾಗಲೋ ಅಲ್ಲಿಂದ ಹಿಂದಿರುಗುವಾಗಲೋ ಎಂದಾದರೊಮ್ಮೆ ದಾರಿಯಲ್ಲಿ ಅವಳನ್ನು ಸಂಧಿಸಿದಂದು, ಅರ್ಥಗರ್ಭಿತವಾದ ಕಣ್ಣನೋಟ, ಮನದಿಂಗಿತವನ್ನು ಸೂಚಿಸುವ ಮುಗುಳುನಗೆ ಮುಂತಾದ ಮನ್ಮಥಬಾಣಗಳನ್ನು ಅವಳ ಕಡೆಗೆ ಎಸೆಯತೊಡಗಿದನು ಶೇಷಗಿರಿ. ಕಲಿತ ಹೆಣ್ಣಿಗೆ ಇವು ಅರ್ಥವಾಗಿರಬೇಕು; ಇವನ ಹೃದಯದ ಕರೆಗೆ ಅವಳ ಹೃದಯ ಮಾರ್ದನಿಗೊಟ್ಟಿತು. ಕೆಲವು ಇಂಗ್ಲಿಷ್ ಪಾಠಗಳನ್ನು ಹೇಳಿಸಿಕೊಳ್ಳುವ ನೆಪಮಾಡಿಕೊಂಡು ಅವಳು ಶೇಷಗಿರಿಯ ಮನೆಗೆ ಹೋಗಿ ಬರಲು ಮೊದಲುಮಾಡ ತೊಡಗಿದಳು. ಭಾಗೀರಥಮ್ಮನಿಗೂ ಅಕ್ಷರಾಭ್ಯಾಸ ಮಾಡಿಸುವ ಪ್ರತ್ಯುಪಕಾರ ಬುದ್ಧಿಯನ್ನು ಮೆರೆಯುವ ಸೋಗುಹಾಕಿದಳು. ಮನೆಗೆಲಸದಲ್ಲಿ ತೊಡಗಿರುತ್ತಿದ್ದ ಅರೆಗುರುಡನಾದ ಮುದುಕ ತಂದೆ, ಮೊದ್ದು ಹೆಂಡತಿ, ಕತ್ತಲೆ ತುಂಬಿದ ಪೂರ್ವಕಾಲದ ಮನೆ....ಇದಕ್ಕಿಂತ ಅನುಕೂಲವಾದ ಸನ್ನಿವೇಶ ಇನ್ನೇನು ಬೇಕು ಈ ಪ್ರಣಯಿಗಳಿಗೆ? ಹೊರಗಿನ ನೋಟಕ್ಕೆ ಶೇಷಗಿರಿ ಸುಭದ್ರೆಯರ ಗುಪ್ತ ಪ್ರಣಯವಿಲಾಸದ ಸುಳಿವೂ ತೋರಿಬರುವಂತಿರಲಿಲ್ಲ. ಸುಭದ್ರೆ ಗರ್ಭಿಣಿ ಯಾದಳು. ವಿಷಮ ಸನ್ನಿವೇಶದಿಂದ ಪಾರಾಗಲು, ತನ್ನ ತಂದೆ ಕೂಡಹಾಕಿಟ್ಟು ತನ್ನ ಕೈಗೆ ಸುಲಭವಾಗಿ ದೊರೆಯುವಂತಿದ್ದ ಒಂದು ಸಾವಿರ ರೂಪಾಯಿಗಳನ್ನೂ ತೆಗೆದುಕೊಂಡು ಶೇಷಗಿರಿ ಓಡಿ ಹೋದನು. ಸುಭದ್ರೆ ಅಂದು ಶಾಲೆಗೆ ಹೋದವಳು ಮನೆಗೆ ಹಿಂದಿರುಗಲೇ ಇಲ್ಲ. ಸುಭದ್ರಾಹರಣದ ವೃತ್ತಾಂತ ಕೆಲವು ದಿನಗಳಲ್ಲಿ ಬೀದಿಯ ಮಾತಾಯಿತು. ಮಗ ಕಣ್ಮರೆಯಾಗಿ ಹೋದ, ಹಣವೂ ಹೋಯಿತು, ಮನೆಯಲ್ಲಿ ಬೇಯಿಸುವುದಕ್ಕೂ ಬಾರದ ಮೊದ್ದು ಸೊಸೆ—ಶೇಷಗಿರಿಯ ತಂದೆಯ ಪಾಡು ನಾಯ ಪಾಡಾಯಿತು. ಅವರಿಗೆ ಗುಂಡಪ್ಪ ಬೇಕಾದಷ್ಟು ಧೈರ್ಯ ಸಮಾಧಾನಗಳನ್ನು ಹೇಳುತ್ತಿದ್ದನಂತೆ. ಅದಕ್ಕೆ ಮುದುಕ—"ಹಣ ಹೋಯಿ ತೆಂದು ನನಗೆ ವ್ಯಸನವಿಲ್ಲ; ಮಗ ಕಣ್ಮರೆಯಾಗಿ ಹೋದನೆಂದೂ ಅಷ್ಟು ವ್ಯಸನ ವಿಲ್ಲ; ನಾನೂ ತೀರಿಹೋದರೆ ಈ ಬಡಪ್ರಾಣಿಗೆ ಗತಿಯಾರು?"—ಎಂದು ಭಾಗೀರಥಿಗಾಗಿ ಕೊರಗುತ್ತಿದ್ದರಂತೆ. ಆದರೆ, ಒಳಗೇ ಪುತ್ರವಿರಹಶೋಕವೂ ಕೊರೆಯದೆ ಇದ್ದೀತೆ? ಮುದುಕ ತಂದೆ ಹಾಸಿಗೆ ಹಿಡಿದರು. ಆ ಕಾಲದಲ್ಲಿ ನಮ್ಮ ಗುಂಡಪ್ಪ ಅವರಿಗೆ ಮಾಡಿದ ಸಹಾಯ ಅಷ್ಟಿಷ್ಟಲ್ಲ. ಹೆಂಡತಿ ಮಕ್ಕಳಿಲ್ಲದ ಆತ

ಕೆಲವು ಕಾಲ ಅವರ ಮನೆಯಲ್ಲಿಯೇ ಇದ್ದುಕೊಂಡು, ಅಡಿಗೆ ಮಾಡಿ ಅವರಿಗೆ ಬಡಿಸಿ ತಾನೂ ಅಲ್ಲಿಯೇ ಊಟಮಾಡುತ್ತಿದ್ದನು. ಗುಂಡಪ್ಪನ ಈ ಸೇವಾ ಕಾರ್ಯ ಬಹಳ ಕಾಲವೇನೂ ನಡೆಯುವುದಾಗಿರಲಿಲ್ಲ. ಏಕೆಂದರೆ, ಶೇಷಗಿರಿಯ ತಂದೆ ಕೊರಗಿನಿಂದಲೇ ಹಾಸಿಗೆ ಹಿಡಿದು ತೀರಿಕೊಂಡರು. ಶೇಷಗಿರಿ ಊರಿನಲ್ಲಿ ಇಲ್ಲದಿದ್ದುದರಿಂದ, ನಂಜನಗೂಡಿನಲ್ಲಿದ್ದ ಅವನ ತಂದೆಯ ದಾಯಾದಿಗಳಿಗೆ ಕಾಗದ ಹಾಕಿಸಲು ಅವರು ಬಂದು ಮೃತರ ಉತ್ತರಕ್ರಿಯಾದಿಗಳನ್ನು ಮಾಡಿ ಮನೆಯಲ್ಲಿಯೇ ತಳವೂರಿದರು. ಕಾಲಕ್ರಮದಲ್ಲಿ ಮನೆಯನ್ನು ಹೇಗೋ ತಮ್ಮದನ್ನಾಗಿ ಮಾಡಿಕೊಂಡು, ಅದನ್ನು ಮಾರಿಯೂ ಬಿಟ್ಟರು. ಆ ಮನೆಯ ಜಗಲಿಯಮೇಲೆ 'ಹೊರಗಾದ' ಮನೆ ಹೆಂಗಸರಿಗೆಂದು ಒಂದು ಚಿಕ್ಕ ಕೋಣೆ ಯಿದ್ದಿತು. ಅಲ್ಲಿ ಒಬ್ಬರು ಕಾಲು ಮುದುಡಿಕೊಂಡು ಮಲಗಬಹುದಾಗಿತ್ತು ಅಷ್ಟೆ. ನಿಂತರೆ ಚಾವಣಿ ತಲೆಗೆ ತಗುಲುವಂತಿತ್ತು. ಬಗ್ಗಿಕೊಂಡೇ ಹೋಗ ಬೇಕಾದಂತಹ ಕುಳ್ಳಾದ ಬಾಗಿಲುವಾಡ; ಹಗಲು ಹೊತ್ತಿನ ಉಪಯೋಗಕ್ಕೆ ಮಾತ್ರ ಏರ್ಪಡಿಸಿದ್ದುದರಿಂದ ಬಾಗಿಲೇ ಇರಲಿಲ್ಲ. ಕಿಟಕಿಯೂ ಇರಲಿಲ್ಲ. ಈ ಕೋಣೆ ಹಲ್ಲಿಗಳ ರಾಜ್ಯ; ಹೆಗ್ಗಣಗಳ ಕ್ರೀಡಾಕ್ಷೇತ್ರ; ಕತ್ತೆ ನಾಯಿಗಳ ವಿಶ್ರಾಂತಿಗೃಹ. ಆ ದಾಯಾದಿಗಳು ಮನೆಯಲ್ಲಿ ಇದ್ದ ಕಾಲದಲ್ಲಿಯೇ ಭಾಗೀರಥಮ್ಮನನ್ನು ಈ ಕೋಣೆಗೆ ಅಟ್ಟಿದರು. ಅವಳ ಭಿಕ್ಷಾನ್ನ ಮೊದಲಾದುದೂ ಆಗಲೇ. ಈ ಸಂದರ್ಭದಲ್ಲಿ ಬೀದಿಯವರ ಆಕ್ಷೇಪಣೆ ಬಲವಾಗಲು, ಆ ದಾಯಾದಿಗಳು ಬೀದಿಯವರಿಗೆ ತಿಳಿಯದಂತೆಯೇ ಮನೆಯನ್ನು ಯಾರಿಗೋ ಮಾರಿ ಹೊರಟುಹೋದರು. ಮನೆಯನ್ನು ಕೊಂಡಾತ ಭಾಗೀರಥಮ್ಮನನ್ನು ಜಗಲಿಯ ಮೇಲಿನ ಕೋಣೆಯಲ್ಲಿಯೇ ಇರಗೊಡಿಸುವಷ್ಟು ಮಟ್ಟಿಗೆ ದಯಾಳು ವಾಗಿದ್ದನು. ಹೀಗೆ, ಭಾಗೀರಥಮ್ಮ ಬೀದಿಯವರ 'ಕರುಣೆಯ ತೊಟ್ಟಿಲ ಶಿಶು' ವಾದರೂ ಸ್ವಗೃಹದಲ್ಲಿಯೇ ವಾಸಮಾಡಿಕೊಂಡಿರುವಷ್ಟು ಮಟ್ಟಿನ ಪುಣ್ಯ ಪಡೆದಿದ್ದಳು.

೪

ಮೊದಮೊದಲು ಭಾಗೀರಥಮ್ಮ ನಿಜವಾಗಿಯೂ ಬೀದಿಯವರ ಕರುಣೆಯ ತೊಟ್ಟಿಲ ಶಿಶುವಾಗಿದ್ದಳು.

ಗಂಡ ತೊರೆದುಹೋದವಳು, ಮನೆಯಿದ್ದೂ ಇಲ್ಲದವಳು, ಹೆಂಗಸಾಗಿ ಹುಟ್ಟಿ ತನ್ನ ಮಟ್ಟಿಗೆ ಕೂಡ ಅಡಿಗೆ ಮಾಡಿಕೊಳ್ಳಲಾರದವಳು—ಎಂಬ ಭಾವನೆ

ಯಿಂದ ಹಬ್ಬಹರಿದಿನಗಳಲ್ಲಿ ಬಡ ಮುತ್ತೈದೆಯೆಂದು ಅವಳನ್ನು ಭೋಜನಕ್ಕೆ ಕರೆದು, ಹೊಟ್ಟೆತುಂಬ ಅನ್ನ ಹಾಕಿ, ಅರಿಸಿನ, ಕುಂಕುಮ, ಹೂವು, ತಾಂಬೂಲ ಗಳನ್ನಿತ್ತು, ನಾಲ್ಕಾಣೆ ದಕ್ಷಿಣೆ ಕೊಟ್ಟು ಅವಳನ್ನು ಬೀದಿಯವರೆಲ್ಲ ಸಂತೋಷ ಪಡಿಸುತ್ತಿದ್ದರು. ಅವಳ ಸತ್ಕಾರ ವಿಚಾರದಲ್ಲಿ ಬೀದಿಯ ಕುಟುಂಬಗಳಲ್ಲಿ ಒಂದು ವಿಧವಾದ ಪೈಪೋಟಿಯೇ ನಡೆಯುತ್ತಿತ್ತು. ಅವಳ ಅಡಿಗೆ ಮಾಡುವ ಕೈ ಅಪ್ರಯೋಜಕವಾಗಿದ್ದರೂ ತಿನ್ನುವ ಬಾಯ ನಾಲಗೆ ಬಹು ಚುರುಕು ಎಂದು ನಮ್ಮ ಗುಂಡಪ್ಪನ ಅಭಿಪ್ರಾಯ. ಅನೇಕ ಮನೆಗಳ ಆಹ್ವಾನವಿದ್ದರೂ ನಮ್ಮ ತಾಯಿ ಮಾಡುವ ಸಾರು ಬಹು ರುಚಿ ಎಂದು ನಮ್ಮ ಮನೆಯ ಆಹ್ವಾನ ವನ್ನೇ ಅವಳು ಹೆಚ್ಚಾಗಿ ಒಪ್ಪಿಕೊಳ್ಳುತ್ತಿದ್ದಳು. ಊಟದ ಜೊತೆಗೆ, ಹಲವರು ಮುತ್ತೈದೆಯರು ದಾನ ಮಾಡುತ್ತಿದ್ದ ಒಳ್ಳೊಳ್ಳೆಯ ಉಟ್ಟ ತೊಟ್ಟ ಸೀರೆ ಕುಪ್ಪಸಗಳೂ ಭಾಗೀರಥಮ್ಮನಿಗೆ ಪ್ರತಿ ವರ್ಷವೂ ಉಡುಗೊರೆಯಾಗಿ ದೊರೆ ಯುತ್ತಿದ್ದುವು. ಹೀಗಾಗಿ, ಬಡ ಭಾಗೀರಥಮ್ಮನಿಗೆ ಪರಮಾತ್ಮನಿಂದ ಅಕ್ಷಯ ವಸ್ತ್ರದ ಅನುಗ್ರಹ ದೊರಕಿದಂತಾಗಿತ್ತು. ಯಾರ ಮನೆಯಲ್ಲಿ ಏನೇ ಕಾರ್ಪಣ್ಯ ವಿರಲಿ, ಕೆಲವು ವರ್ಷ ಕಾಲ ಭಾಗೀರಥಮ್ಮ ಹೊಟ್ಟೆ ತುಂಬ ಉಂಡು ಮೈ ತುಂಬ ಬಟ್ಟೆ ಧರಿಸುತ್ತಿದ್ದಳು. ನಮ್ಮ ಬೀದಿಯಲ್ಲಿ 'ಬೀದಿಯ ಬಸವ' ಒಂದಿತ್ತು ; ಬಸವನೇನು, ಗೂಳಿ ; ವೃಷೋತ್ಸರ್ಗಕ್ಕೆ ಬಿಟ್ಟ ಹೋರಿಗರು ಗೂಳಿಯಾಗಿ ಚೆನ್ನಾಗಿ ಮೈ ತುಂಬಿಕೊಂಡು ಬೆಳೆದಿತ್ತು. ಆದರೂ ಬಹು ಸಾಧು. ಯಾವುದೋ ಪೂರ್ವಜನ್ಮದ ಋಣಾನುಬಂಧದಿಂದ ಎಂಬಂತೆ, ಆ ಗೂಳಿ ಭಾಗೀರಥಮ್ಮನ ಕೋಣೆಯ ಬಳಿಯ ಜಗಲಿಯ ಮೇಲೆಯೇ ಮಲಗುತ್ತಿತ್ತು. ಭಾಗೀರಥಮ್ಮ ಭಿಕ್ಷಾನ್ನ ಭುಂಜಿಸಿ ಉಳಿದ ಭಾಗವೆಲ್ಲಾ ಆ ಬಸವನ ಪಾಲು. ಭಾಗೀರಥಮ್ಮನ ಎಂಜಲಿಗಾಗಿ ಆ ಗೂಳಿಗೂ ಬೀದಿಯ ಒಂದು ಕೆಂಚ ನಾಯಿಗೂ ನಿತ್ಯ ಜಗಳ.

"ಭಾಗೀರಥಮ್ಮ, ನೀವು ನಂಜನಗೂಡು ಶ್ರೀಕಂಠೇಶ್ವರನಿಗೆ ಹರಸಿ ಕೊಳ್ಳಿ. ಪ್ರತಿವರ್ಷ ಜಾತ್ರೆಯ ಕಾಲಕ್ಕೆ ಹೋಗಿ ದೇವರ ಸೇವೆ ಮಾಡಿ. ನಿಮ್ಮ ಯಜಮಾನರು ಹಿಂದಿರುಗಿ ಬಂದರೂ ಬರುತ್ತಾರೆ" ಎಂದು ಗುಂಡಪ್ಪ ಒಮ್ಮೆ ಅವಳಿಗೆ ಸಲಹೆ ಮಾಡಿದರಂತೆ. ಗಂಡನನ್ನು ಮನೆಯಲ್ಲಿ ಉಳಿಸಿ ಕೊಳ್ಳುವ ಸಾಮರ್ಥ್ಯ ಅವಳಿಗಿಲ್ಲದಿದ್ದರೂ ಆತ ಎಂದಾದರೂ ಹಿಂದಿರುಗಿ ಬಂದೇ ಬರುತ್ತಾನೆ, ಎಲ್ಲಿಯೋ ಇದ್ದಾನೆ, ಸತ್ತಿಲ್ಲ–ಎಂಬ ಭಾವನೆ ಅವಳಲ್ಲಿ ಸಹಜವಾಗಿ ನೆಲಸಿತ್ತು ; ಗುಂಡಪ್ಪನ ಮಾತು ಈ ನಂಬಿಕೆಗೆ ಒತ್ತಾಸೆಕೊಟ್ಟಿತ್ತು. ಇದಕ್ಕಾಗಿ ಅವಳು ಪ್ರತಿವರ್ಷವೂ ಒಮ್ಮೆ ನಂಜನಗೂಡಿಗೆ ಹೋಗಿ ಅಲ್ಲಿ ಕೆಲವು

ಕಾಲ ಇರುತ್ತಿದ್ದಳು. ಇದು ಅವಳಿಗೆ ಅಷ್ಟೇನೂ ಕಷ್ಟವಾಗಿರಲಿಲ್ಲ. ಹೋಗಬರ ರೈಲು ಚಾರ್ಜಿಗೆ ಎಂಟಾಣೆಯಾದರೆ ಸಾಕು ; ಇರುವಷ್ಟು ಕಾಲವೂ ಶಿವಕೂಟದಲ್ಲಿ ನಿತ್ಯ ಭೋಜನವಾಗುತ್ತಿತ್ತು. ಮೊದಲ ವರ್ಷ ಇವಳು ಸ್ವಂತ ವೆಚ್ಚದಲ್ಲಿಯೇ ನಂಜನಗೂಡಿಗೆ ಹೋಗಿ ಬಂದಳಂತೆ. "ನಿಮ್ಮ ಹಣ ಯಾಕೆ ವೆಚ್ಚಮಾಡುತ್ತೀರಿ ? ಯಾರನ್ನಾದರೂ ಕೇಳಿ, ಕೊಡುತ್ತಾರೆ" ಎಂದು ಗುಂಡಪ್ಪ ಅವಳಿಗೆ ಸಲಹೆಮಾಡಿದನಂತೆ. ಆದರಂತೆ, ಭಾಗೀರಥಮ್ಮ ಪ್ರತಿ ವರ್ಷವೂ ಯಾರನ್ನಾದರೂ ನಂಜನಗೂಡಿನ ಯಾತ್ರೆಗಾಗಿ ಎಂಟಾಣೆ ಬೇಡು ವುದು ರೂಢಿಯಾಯಿತು. ಅವಳು ನಂಜನಗೂಡಿನಿಂದ ಹಿಂದಿರುಗಿದ ಕೂಡಲೆ, ಬೀದಿಯ ತುಂಟ ಪೋರರಾದ ನಾವು—

"ನಂಜನಗೂಡಿಗೆ ಹೋಗಿದ್ಯಾ | ನಂದಿ ಕಂಬ ನೋಡಿದ್ಯಾ ||
ಕಾಸಿನ ಕಡಲೆ ಕೊಂಡಿದ್ಯಾ | ಕಾಣದ ಗಂಡನ ಕಂಡಿದ್ಯಾ ||"

—ಎಂದು ಅವಳ ಮುಂದೆ ರಾಗವಾಗಿ ಹಾಡುತ್ತ ಗೇಲಿ ಮಾಡುತ್ತಿದ್ದೆವು. ಗಂಡನಿಲ್ಲದ್ದಕ್ಕಾಗಿ ದುಃಖಗೊಳ್ಳದ ಆ ಬಡಪಾಯಿ, ಗಂಡನ ವಿಚಾರ ಎತ್ತಿ ಆಡಿದ್ದಕ್ಕಾಗಿ ಕೋಪಗೊಳ್ಳುತ್ತಲೂ ಇರಲಿಲ್ಲ. "ಸ್ವಲ್ಪ ಕಡಲೆ ತಂದಿದೀನಿ, ಕೊಳ್ಳಿ" ಎಂದು ತಾನು ತಂದಿದ್ದ ಕಡಕೋಳದ ಕಡಲೆಯನ್ನು ನಮಗೆಲ್ಲಾ ಹಂಚಿ ಬಿಡುತ್ತಿದ್ದಳು.

ನಾವು ಭಾಗೀರಥಮ್ಮನನ್ನು ಹಲವು ವಿಧದಲ್ಲಿ ಗೋಳುಹುಯ್ದುಕೊಳ್ಳು ತ್ತಿದ್ದೆವು. ಅವಳ ಭಿಕ್ಷಾನ್ನದ ಪಾತ್ರೆಗೆ ಕಲ್ಲು ಬೀರುತ್ತಿದ್ದ ಸಂಗತಿಯನ್ನು ಹಿಂದೆಯೇ ಹೇಳಿರುವೆನಷ್ಟೆ. ಆ ಬಡಪ್ರಾಣಿ ಬೀದಿಯಲ್ಲಿ ನಿಧಾನವಾಗಿ ಕುಂಟು ವಂತೆ ನಡೆದುಹೋಗುತ್ತಿದ್ದರೆ, ಸರದಿಯ ಮೇರೆ ನಮ್ಮಲ್ಲಿ ಒಬ್ಬೊಬ್ಬರು ಒಂದೊಂದು ದಿನ ಮೆಲ್ಲನೆ ಅವಳ ಹಿಂದೆಯೇ ಹೋಗಿ ಅವಳ ಮೇಲುಗಚ್ಚೆಯನ್ನು ಎಳೆದುಬಿಡುತ್ತಿದ್ದೆವು. ತನಗೆ ನಮ್ಮ ತುಂಟಾಟ ತಿಳಿಯದಷ್ಟು ಮೊದ್ದಾಗಿರ ಲಿಲ್ಲ ಅವಳು. ನೆರೆಯವರು ಯಾರಾದರೂ ನಮ್ಮ ಕುಚೇಷ್ಟೆಯನ್ನು ಕಂಡು ನಮ್ಮನ್ನು ಗದರಿಕೊಂಡರೆ, "ಮಕ್ಕಳು ಪಾಪ, ಬಿಡಿ" ಎಂದು ಕಚ್ಚೆಯನ್ನು ಸರಿಪಡಿಸಿಕೊಳ್ಳುತ್ತ ತನ್ನ ಪಾಡಿಗೆ ತಾನು ಮುಂದೆ ಹೋಗುತ್ತಿದ್ದಳು ; ಹಿಂದಿರುಗಿಯೂ ನೋಡುತ್ತಿರಲಿಲ್ಲ. ಅವಳ ಈ ಸಾಧುವರ್ತನೆಯೂ ನಮ್ಮ ಹಾಸ್ಯಕ್ಕೆ ಗುರಿಯಾಗಬೇಕೆ, ಪಾಪ ? "ಬಾಲ ನುಲಿಚಿದರೆ ನಮ್ಮ ಬಸವ ಹಾಯೋದಿಲ್ಲ ; ಕಚ್ಚೆ ಎಳೆದರೆ ಭಾಗೀರಥಮ್ಮ ಬೈಯೋದಿಲ್ಲ" ಎಂದು ಪಲ್ಲವಿ ಹಾಡುತ್ತಿದ್ದೆವು. ನಂಜನಗೂಡಿನ ಯಾತ್ರೆ ಪ್ರಾರಂಭವಾದಂದಿನಿಂದ ಭಾಗೀರಥಮ್ಮ ಸೋಮವಾರ ರಾತ್ರೆ ಊಟಮಾಡುತ್ತಿರಲಿಲ್ಲ ; ಅಂಗಡಿಯಿಂದ ನಾಲ್ಕು ಬಾಳೆಯ

ಹಣ್ಣುಗಳನ್ನು ತಂದು ತನ್ನ ಕೋಣೆಯಲ್ಲಿ ಫಲಾಹಾರಕ್ಕಾಗಿ ಇಟ್ಟುಕೊಂಡಿರುತ್ತಿದ್ದಳು; ಆ ಕೋಣೆಗೆ ಬಾಗಿಲಿರಲಿಲ್ಲ. ನಮ್ಮ ಗುಂಡಪ್ಪನೇ (ತಾನು ಸಾಯುವ ಮುನ್ನ) ಒಂದು ಗೋಣಿಯ ತಾಟಿನ ತೆರೆಯನ್ನು ಬಾಗಿಲಿಗೆ ಅಳವಡಿಸಿ ಕೊಟ್ಟಿದ್ದನು. ಅವಳ ಈ ಸೋಮವಾರ ರಾತ್ರಿಯ ಫಲಾಹಾರದ ವಿಚಾರ ನಮಗೆ ಗೊತ್ತಾದ ಕೂಡಲೆ, ಸಮಯ ಕಾದಿದ್ದು, ಅವಳು ಇಲ್ಲದ ವೇಳೆಯಲ್ಲಿ ಆ ಬಾಳೆಯ ಹಣ್ಣನ್ನು 'ಎಗರಿಸಿ' ನಮ್ಮ ನಮ್ಮಲ್ಲಿ ಹಂಚಿಕೊಂಡು ತಿಂದು, ಸಿಪ್ಪೆಯನ್ನು ಬೀದಿಯ ಬಸವನಿಗೆ ತಿನ್ನಿಸಿಬಿಡುತ್ತಿದ್ದೆವು. ಮಾರನೆಯ ದಿನ ಅವಳು ನಮ್ಮಲ್ಲಿಯೇ ದೂರು ಹೇಳಿಕೊಳ್ಳುತ್ತಿದ್ದಳು: "ನೋಡಿರಪ್ಪಾ, ಬಾಳೆಯ ಹಣ್ಣು ತಂದು ಇರಿಸಿಕೊಂಡಿದ್ದೆ. ಎಲ್ಲೋ ಹಾಳು ನಾಯಿ ಕಚ್ಚಿಕೊಂಡು ಹೋಯಿತೇನೋ." ಅದಕ್ಕೆ ನಾವು, "ಭಾಗೀರಥಮ್ಮನವರೇ, ನಾಯಿ ಎಲ್ಲಾದರೂ ಬಾಳೆಯ ಹಣ್ಣು ತಿನ್ನುತ್ತದೆಯೇ? ನಂಜುಂಡೇಶ್ವರನೇ ಬಂದು ತೆಗೆದುಕೊಂಡು ಹೋಗಿರಬೇಕು" ಎಂದು ನಗುತ್ತಿದ್ದೆವು. ನಮ್ಮಲ್ಲೆಲ್ಲ ಬಹಳ ಚಿಕ್ಕವನಾದ ನಂಜುಂಡನನ್ನು ಈ ಚೌರ್ಯಕ್ಕೆ ಮುಂದೆ ಬಿಡುತ್ತಿದ್ದೆವು. ನಮ್ಮ ಮಾತು ಅವಳಿಗೆ ಅರ್ಥವಾಗುತ್ತಿರಲಿಲ್ಲ. "ನಾನು ಅಷ್ಟು ಪುಣ್ಯ ಮಾಡಿದೀನೇನ್ರಪ್ಪ" ಎನ್ನುತ್ತಿದ್ದಳು. ಹೀಗೆ, ನಾನಾ ಬಗೆಯಲ್ಲಿ ಅವಳಿಗೆ ಕಿರುಕುಳ ಕೊಡುತ್ತಿದ್ದೆವು ನಾವು. ಇದಕ್ಕಾಗಿ ಮುಂದಿನ ಜನ್ಮದಲ್ಲಿ ನಮಗೆ ಯಾವ ಶಿಕ್ಷೆ ಕಾದಿದೆಯೋ ನಾವು ಕಾಣೆವು.

ನಾವು ಚಿಕ್ಕವರಾಗಿದ್ದಂದು, ಈಗಿನ ಕಾಲದ ಸಿನಿಮಾ ಹಾಡುಗಳು, ಗ್ರಾಮಫೋನ್ ಸಂಗೀತ, ರೇಡಿಯೋ ಸಂಗೀತ—ಇವು ನಾಗರಿಕ ಜೀವನಕ್ಕೆ ಇನ್ನೂ ನುಸುಳಿರಲಿಲ್ಲ. ಬೀದಿಯ ಹೆಣ್ಣು ಮಕ್ಕಳು ಆಗತಾನೆ ಇಂಗ್ಲಿಷು ವಿದ್ಯಾಭ್ಯಾಸಕ್ಕೂ ಅಲ್ಪ ಸ್ವಲ್ಪ ಪ್ರಾರಂಭಮಾಡಿದ್ದುದರಿಂದ, ಹಳೆಯ ಕಾಲದ ಹಾಡುಗಳು ತಮಗೆ ಬಂದರೂ ಅವನ್ನು ಹೇಳಲು ಅದೇನೋ ನಾಚುತ್ತಿದ್ದರು; ಹೊಸಕಾಲದ ಹಾಡುಗಳು ಅಷ್ಟಾಗಿ ಪ್ರಚಾರವಾಗಿರಲಿಲ್ಲ. ಹೀಗಾಗಿ, ಹಬ್ಬ ಆರತಿಯಕ್ಷತೆ ಮೊದಲಾದ ಸಂದರ್ಭಗಳಲ್ಲಿ ಹಿರಿಯ ಮುತ್ತೈದೆಯರೇ ಹಾಡು ಹೇಳಬೇಕಾಗಿದ್ದಿತು. ದಿಕ್ಕಿಲ್ಲದ ಬಡ ಮುತ್ತೈದೆಯೆಂದು ಭಾಗೀರಥಮ್ಮನನ್ನು ಯಾರೂ ಆರತಿಗೆ ಕರೆಯದೆ ಇರುತ್ತಿರಲಿಲ್ಲ; ಕರೆಕರೆದು ರೂಢಿಯಾಗಿ ಕರೆಯದಿದ್ದರೂ ಆರತಿಗೆ ಹೋಗುವುದು ಭಾಗೀರಥಮ್ಮನ ರೂಢಿಯಾಗಿಬಿಟ್ಟಿತು. ಆದರೂ ಕರೆಯದ ಮುತ್ತೈದೆ ಎಂದು ಅವಳ ಬಗ್ಗೆ ತಿರಸ್ಕಾರವಿರಲಿಲ್ಲ. ವಿಶೇಷವೇನೆಂದರೆ, ಪೂರ್ವಕಾಲದ ಸೋಬಾನೆ ಹಾಡುಗಳು ಅವಳಿಗೆ ಬರುತ್ತಿದ್ದಷ್ಟು ನಮ್ಮ ಬೀದಿಯಲ್ಲಿ ಬೇರೆ ಯಾವ ಮನೆಯಾಕೆಗೂ ಬರುತ್ತಿರಲಿಲ್ಲ. ಭಾಗೀರಥಮ್ಮನಿಗೆ

ಇಷ್ಟೊಂದು ಹಾಡುಗಳು ಬರುತ್ತವೆಯೆಂದು ಯಾರಿಗೂ ತಿಳಿಯದು. ನಮ್ಮ ಮನೆಯಲ್ಲಿ ನಡೆದ ಒಂದು ಶುಭಕಾರ್ಯ ಸಂದರ್ಭದಲ್ಲಿ, "ನೀವು ಹೇಳಿ ನೀವು ಹೇಳಿ" ಎಂದು ಬಂದ ಮುತ್ತೈದೆಯರಿಂದ ಹಾಡು ಹೇಳಿಸಲು 'ಪಿರಕಣಿ'ಗೆ (ಒತ್ತಾಯಕ್ಕೆ) ಮೊದಲಿಟ್ಟಾಗ ಭಾಗೀರಥಮ್ಮ ಮುಂದೆ ಬಂದು, "ನಾನು ಹೇಳು ತ್ತೇನೆ, ಬಿಡಿ ಅಂದ್ರೆ" ಎಂದು ಹಾಡಿಗೆ ಪ್ರಾರಂಭಮಾಡಿಯೇ ಬಿಟ್ಟಳು. ಸುಮಾರು ಒಂದು ಗಂಟೆಯ ಕಾಲ ಎರಡು ಮೂರು ಹಾಡುಗಳನ್ನು ಮಾತ್ರ ಹಾಡಿದಳು. ಅಂದಿನಿಂದ ಎಲ್ಲರ ಮನೆಯಲ್ಲಿಯೂ ಶುಭ ಸಂದರ್ಭಗಳಲ್ಲಿ ಅವಳ ಹಾಡಿಕೆ ತಪ್ಪದೆ ನಡೆಯುತ್ತಿತ್ತು. ಅವಳ ಹಾಡಿಕೆ ಬೇಸರ ಹಿಡಿಸುವ ಕಾಲವೂ ಬರದೆ ಇರಲಿಲ್ಲ; ಏಕೆಂದರೆ ಅವಳ ಕಂಠ ಚೆನ್ನಾಗಿರ ಲಿಲ್ಲ. ಕಂಠ ಚೆನ್ನಾಗಿದ್ದಿದ್ದರೆ, 'ಭಿಕ್ಷಾನ್ನದ ಭಾಗೀರಥಮ್ಮ' ಎನ್ನುವ ಬದಲು 'ಹಾಡಿನ ಭಾಗೀರಥಮ್ಮ' ಎಂದೇ ಪ್ರಸಿದ್ಧಳಾಗುತ್ತಿದ್ದಳೇನೊ. ಕಂಠ ಚೆನ್ನಾಗಿಲ್ಲದಿದ್ದರೂ, ಕೇಳುವವರಿಗೆಲ್ಲರಿಗೂ ಬೇಸರ ಹಿಡಿದು, 'ಸಾಕು, ಆರತಿ ಯೆತ್ತುವ ಹಾಡು ಹೇಳಿಬಿಡಿ' ಎಂದರೂ, ತನಗೆ ಸಾಕೆನ್ನಿಸುವವರೆಗೂ ಭಾಗೀರಥಮ್ಮ ಹಾಡಿಕೆ ನಿಲ್ಲಿಸುತ್ತಿರಲಿಲ್ಲ. 'ಭಗೀರಥ ಬಂದರೂ ಭಾಗೀರಥಮ್ಮನ ಹಾಡು ನಿಲ್ಲಲು ಸಾಧ್ಯವಿಲ್ಲ' ಎಂದು ಗುಂಡಪ್ಪ ಹೇಳುತ್ತಿದ್ದನು. ಇದು ಹೇಗಾದರೂ ಇರಲಿ. 'ಹೆಂಗಸು ಎಂದಮೇಲೆ ಹಾಡು ಹಸೆ ಬಂದಿರಬೇಕು' ಎಂಬುದು ಆ ಕಾಲದ ಭಾವನೆ. ಹೆಂಗಸು ಎನ್ನಿಸಿಕೊಳ್ಳಲು ಈ ಒಂದು ಅರ್ಹತೆ ಯನ್ನಂತೂ ಭಾಗೀರಥಮ್ಮ ಪಡೆದಿದ್ದಳು. ಅವಳು ತನ್ನ ಗಂಡನ ಮುಂದೆ ಈ ಗುಣವನ್ನು ತೋರಿಸಿಕೊಂಡಿರಲಿಲ್ಲವೆಂದು ಕಾಣುತ್ತದೆ; ಅಥವಾ ತೋರಿಸಿ ಕೊಂಡರೂ ಸುಭದ್ರೆಯ ಹಾಡಿನ ಸೊಗಸಿನ ಮುಂದೆ ಭಾಗೀರಥಿಯ ಬಡ ಹಾಡಿಕೆ ಅವನಿಗೆ ರುಚಿಸದೆ ಹೋಗಿರಬೇಕು. ಬೀದಿಯವರಿಗೆ ಬೇಕಾದವಳು ಗಂಡನಿಗೇ ಬೇಡವಾದಳು.

ಭಾಗೀರಥಮ್ಮನ ಜೀವನ ರಥೋತ್ಸವ ಹೀಗೆ ನಿರಾತಂಕವಾಗಿ ಕೆಲವು ವರ್ಷಕಾಲ ಸಾಗಿತು. ಅವಳ ಜೀವನದಲ್ಲಿ ನಿತ್ಯ ಒಂದೇ ಕಾರ್ಯಕ್ರಮ. ವೈವಿಧ್ಯವಿಲ್ಲ, ವಿಶೇಷವಿಲ್ಲ. ನಡೆದ ಒಂದು ವಿಶೇಷ ಸಂಗತಿಯೆಂದರೆ, ಅವಳು ಒಂದು ಸಲ ಬಲವಾಗಿ ಖಾಯಿಲೆ ಬಿದ್ದದ್ದು. ಎರಡು ದಿನ ಒಂದೇ ಸಮನಾಗಿ ಭಿಕ್ಷಾನ್ನಕ್ಕೆ ಬಾರದಿದ್ದುದರಿಂದ ಗುಂಡಪ್ಪನಿಗೆ ಶಂಕೆಯುಂಟಾಗಿ ಅವಳ ಕೋಣೆಯ ಬಳಿ ಹೋಗಿ ಇಣಿಕಿ ನೋಡಿದನು. ಭಾಗೀರಥಮ್ಮ ಮೈಮೇಲೆ ಪ್ರಜ್ಞೆಯಿಲ್ಲದೆ ಬಿದ್ದಿದ್ದುದು ಅವನ ಗಮನಕ್ಕೆ ಬಂದು, ಹೆಂಡತಿ ಮಕ್ಕಳು ಯಾರೂ ಇಲ್ಲದ ಆತ ಅವಳ ಉಪಚಾರಕ್ಕೆ ನಿಂತನು. "ಅವಳು ಸತ್ತರೆ ಸಾಯಲಿ. ಮುತ್ತೈದೆ

ಸಾವು. ಅವಳ ಕಷ್ಟ ಬಿಡುಗಡೆಯಾಗುತ್ತೆ" ಎಂದು ಬೀದಿಯವರ ಅಭಿಪ್ರಾಯ. ಆದರೆ ಗುಂಡಪ್ಪನಿಗೆ ಹಾಗೆನಿಸಲಿಲ್ಲ. "ನನಗೆ ಮನೆಯಿಲ್ಲ ಮಠವಿಲ್ಲ, ಕ್ರಮ ವಾದ ಸಂಧ್ಯಾವಂದನೆಯಿಲ್ಲ, ದೇವರ ಪೂಜೆಯಿಲ್ಲ. ಇದೇ ನನ್ನ ದೇವರ ಪೂಜೆ" ಎಂದು ಗುಂಡಪ್ಪ ಬೀದಿಯವರಿಗೆ ಹೇಳಿದನಂತೆ. ಈ ಪ್ರಕರಣವಾದ ಒಂದೆರಡು ವರ್ಷಗಳನಂತರ ಗುಂಡಪ್ಪನೇ ತೀರಿಹೋದನು. ಭಾಗೀರಥಮ್ಮನಿಗಾಗಿ ಅಂತಃಕರಣಪೂರ್ವಕವಾಗಿ ಮರುಗುತ್ತಿದ್ದ ಒಬ್ಬ ವ್ಯಕ್ತಿ ಇಲ್ಲವಾಯಿತು.

## ೫

ಶೇಷಗಿರಿ ಹೆಂಡತಿಯನ್ನು ತೊರೆದು ಹೋಗಿ ಹನ್ನೆರಡು ವರ್ಷಗಳ ಮೇಲಾಯಿತು. ಬೀದಿಯವರೆಲ್ಲ ಅವಳಿಗೆ ಮಡಿ ಹಿಡಿಯಬೇಕೆಂದು ಬೋಧನೆ ಮಾಡಿದರು. ಆದರೆ ತನ್ನ ಗಂಡ ಎಲ್ಲಿಯೋ ಬದುಕಿದ್ದಾನೆ ಎಂದು ಅವಳ ಅಚಲವಾದ ನಂಬಿಕೆ. ಅವಳು ಮಡಿ ಹಿಡಿದರೂ ಒಂದೇ, ಹಿಡಿಯದಿದ್ದರೂ ಒಂದೇ, ಎಂಬುದು ಬೀದಿಯವರಿಗೆ ಅದೇಕೋ ಅರ್ಥವಾಗಲೊಲ್ಲದು. ಅವಳ ಬಗ್ಗೆ ಬೀದಿಯವರಿಗೆ ಆದರ ಕಡಮೆಯಾಯಿತು. ಆರತಿಯಕ್ಷತೆಗಳಿಗೆ ಕರೆದರೂ ಕರೆಯದಿದ್ದರೂ ಎಂದಿನಂತೆ ತಪ್ಪದೆ ಬರುತ್ತಿದ್ದ ಅವಳ ಕೈಗೆ ಬಾಗಿನದ ಉಂಡೆ ಗಳನ್ನು ಹಾಕಿದರೂ ಅರಸಿನ ಕುಂಕುಮ ಕೊಡುವುದನ್ನು ನಿಲ್ಲಿಸಿಬಿಟ್ಟರು. ಆದರೂ, ಬೀದಿಯವರು ಎಂದಿನಂತೆಯೇ ಅವಳಿಗೆ ಕೈತುಂಬ ಭಿಕ್ಷಾನ್ನವಿಡು ತ್ತಿದ್ದರು. ಮುಂಜಿ ಮದುವೆಯ ದಿನಗಳಲ್ಲಿ ಅವಳಿಗೆ ಊಟಕ್ಕೂ ಹೇಳು ತ್ತಿದ್ದರು. ಆದರೆ, ಸುವಾಸಿನಿಯರ ಪಂಕ್ತಿಯಲ್ಲಿ ಕೂರಲು ಅವಳಿಗೆ ಅವಕಾಶ ಕೊಡುತ್ತಿರಲಿಲ್ಲ; ಮಡಿ ಹೆಂಗಸರು ಅವಳನ್ನು ಹತ್ತಿರಕ್ಕೇ ಸೇರಿಸುತ್ತಿರಲಿಲ್ಲ. ಎಲ್ಲರ ಮನೆಯಲ್ಲೂ ಅವಳ ಊಟಕ್ಕಾಗಿ ಒಂದು ಮೂಲೆ ಮೀಸಲಾಗಿರು ತ್ತಿತ್ತು. ನಮ್ಮ ಮನೆಯಲ್ಲಿ ಒರಳುಕಲ್ಲಿದ್ದ ಮೂಲೆಯಲ್ಲಿ ಅವಳು ಊಟಕ್ಕೆ ಕೂರುತ್ತಿದ್ದುದು ನನಗೆ ಚೆನ್ನಾಗಿ ನೆನಪಿದೆ.

ಗುಂಡಪ್ಪ ತೀರಿಕೊಂಡದ್ದು ಭಾಗೀರಥಮ್ಮನಿಗೆ ಬಹು ದುಃಖದ ವಿಷಯ ವಾಗಿತ್ತು. "ಗುಂಡಪ್ಪ ಬದುಕಿದ್ದರೆ ನನಗೆ ಗತಿ ಕಾಣಿಸುತ್ತಿದ್ದರು. ನಾನು ಸತ್ತರೆ ನನ್ನ ಹೆಣ ನಾಯಿಪಾಲು, ಅಷ್ಟೆ" ಎಂದು ಕೊರಗುತ್ತಿದ್ದಳು. "ನೀವು ಯೋಚನೆ ಮಾಡಬೇಡಿ. ಯಾರೂ ಗತಿ ಕಾಣಿಸದಿದ್ದರೂ ನಾವು ಕಾಣಿಸು ತ್ತೇವೆ" ಎಂದು ನಮ್ಮ ತಾಯಿ ಅವಳಿಗೆ ಸಮಾಧಾನ ಹೇಳುತ್ತಿದ್ದರು.

ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿರುವ ಒಂದು ನೆನಪಿನ ಸಂಗತಿ

ಆಗ ನನಗೆ ನಗುವುಂಟುಮಾಡುತ್ತಿತ್ತು; ಈಗ ಮನಸ್ಸನ್ನು ಕೊರೆಯುತ್ತಿದೆ. ಅವಳು ಒಂದು ಸಲ ಒಂದು ಅಂಚೆಯ ಕಾರ್ಡನ್ನು ತಂದು, "ನಮ್ಮ ಯಜಮಾನರಿಗೆ ಕಾರ್ಡು ಬರೆದು ಕೊಡಪ್ಪ" ಎಂದು ಹೇಳಿ ಅದನ್ನು ನನ್ನ ಕೈಗೆ ಕೊಟ್ಟಳು. ಆಗ ನಾನು ಮಿಡ್ಲ್ ಸ್ಕೂಲ್ ಪರೀಕ್ಷೆಯ ತರಗತಿಯಲ್ಲಿ ಓದುತ್ತಿದ್ದೆ. "ಏನು ಬರೆಯಲಿ ?" ಎಂದು ಕೇಳಿದೆ. "'ನಾನು ಸಾಯುವ ಕಾಲ, ಎಲ್ಲಿದ್ದರೂ ಬೇಗ ಬಂದುಬಿಡಿ. ನಾನು ಸತ್ತ ಮೇಲೆ ನೀವು ಎಲ್ಲಿಗೆ ಬೇಕಾದರೂ ಹೋಗಿ,' ಎಂದು ಬರೆಯಪ್ಪ" ಎಂದು ತಿಳಿಸಿದಳು. ನಾನು ಹಾಗೆಯೇ ಬರೆದೆ. "ಅಡ್ರೆಸ್ಸು ಏನು ಬರೆಯಲಿ ?" ಎಂದು ಕೇಳಿದೆ. "ಹಾಗೆಂದರೆ ಏನಪ್ಪ ?" ಎಂದು ಪ್ರಶ್ನಿಸಿದಳು. "ವಿಳಾಸ" ಎಂದೆ. "ಹಾಗೆಂದರೇನೋ ನನಗೆ ತಿಳಿಯದಪ್ಪ" ಎಂದು ತನ್ನ ಮೌಢ್ಯವನ್ನು ನನಗೆ ಸ್ಪಷ್ಟಮಾಡಿದಳು. ಅವಳಿಗೆ ಆ ಮಾತು ಅರ್ಥವಾಗಿಲ್ಲವೆಂದು ನಿಶ್ಚಯಿಸಿ, "ನಿಮ್ಮ ಯಜಮಾನರ ಹೆಸರು, ಅವರು ಇರುವ ಊರು, ಆ ಊರಿನಲ್ಲಿ ಅವರಿರುವ ಬೀದಿ, ಆ ಬೀದಿಯಲ್ಲಿ ಅವರಿರುವ ಮನೆಯ ನಂಬರು" ಎಂದು ವಿವರಿಸಿ ಹೇಳಿದೆ. "ಅವರ ಹೆಸರು........ನಿನಗೇ ಗೊತ್ತಿದೆಯಪ್ಪ. ನಾನು ಅವರ ಹೆಸರು ಹೇಳಬಹುದೇ, ನೀನೇ ಹೇಳು ? ಮಿಕ್ಕ ವಿಚಾರ ಅದೇನೋ ನನಗೆ ತಿಳಿಯದು. ಅವರು ಎಲ್ಲಿ ಇದ್ದಾರೋ ಅಲ್ಲಿಗೇ ಬರೆದು ಹಾಕಪ್ಪ" ಎಂದು ನುಡಿದಳು. "ಸ್ವರ್ಗಕ್ಕೆ" ಎಂದು ವಿಳಾಸ ಬರೆದು ಕಾರ್ಡನ್ನು ಹಿಂದಕ್ಕೆ ಕೊಟ್ಟೆ. ಏನೂ ಅರಿಯದ ಆ ಪ್ರಾಣಿ ಕಾರ್ಡನ್ನು ಅಂಚೆಯ ಡಬ್ಬಕ್ಕೆ ಹಾಕಿದ್ದನ್ನು ನಾನು ಶಾಲೆಗೆ ಹೋಗುವಾಗ ನೋಡಿದೆ. ಒಂದೆರಡು ತಿಂಗಳಾದಮೇಲೆ "ಅವರು ಬರಲೇ ಇಲ್ಲ, ಅವರಿಂದ ಉತ್ತರವೂ ಬರಲಿಲ್ಲ. ಇನ್ನೊಂದು ಕಾರ್ಡು ಬರೆದು ಕೊಡಪ್ಪ" ಎಂದು ಭಾಗೀರಥಮ್ಮ ನನ್ನ ಕೈಗೆ ಕಾರ್ಡು ಕೊಟ್ಟು ಮತ್ತೆ ಪ್ರಾರ್ಥಿಸಿದಳು. ಇದನ್ನು ಕಂಡ ನಮ್ಮ ತಾಯಿ, "ಬರೆದು ಅವನೇ ಡಬ್ಬಕ್ಕೆ ಹಾಕುತ್ತಾನೆ. ಯೋಚನೆ ಮಾಡಬೇಡ" ಎಂದು ಅವಳಿಗೆ ನಂಬಿಕೆ ಹೇಳಿದರು. ಎರಡು ಮೂರು ತಿಂಗಳಿಗೊಂದು ಸಲ ಭಾಗೀರಥಮ್ಮನ ಗಂಡನಿಗೆ ಕಾರ್ಡು ಬರೆದು ಹಾಕುವ ನಾಟಕ ನಡೆಯುತ್ತಿತ್ತು. ಅಂದರೆ, ಕಾರ್ಡು ಬರೆಯುತ್ತಲೇ ಇರಲಿಲ್ಲ. ನಮ್ಮ ತಾಯಿ ಕಾರ್ಡಿನ ಬೆಲೆಯನ್ನು ಮಾತ್ರ ಹಾಗೆಂದು ತಿಳಿಸದೆ ಅವಳಿಗೆ ಹಿಂದಿರುಗಿ ಕೊಟ್ಟುಬಿಡುತ್ತಿದ್ದರು.

ಭಾಗೀರಥಮ್ಮನ ಜೀವನ ನಾಟಕ ಇದ್ದಕ್ಕಿದ್ದ ಹಾಗೆ ಒಂದು ದಿನ ಮುಗಿಯಿತು. ಖಾಯಿಲೆಯಿಂದ ನರಳದೆಯೆ ಕಣ್ಣು ಮುಚ್ಚಿದಳು. "ಹೃದಯ ಸ್ತಂಭನದಿಂದ ಸತ್ತಳು" ಎಂದು ಅಧಿಕಾರವಾಣಿಯಿಂದ ಹೇಳಲು ಯಾವ

ವೈದ್ಯರೂ ಬಂದಿರಲಿಲ್ಲ. ಅಂತೂ ಹಾಗೆ ಅನಾಯಾಸ ಮರಣಹೊಂದಿದ್ದಕ್ಕಾಗಿ ಬೀದಿಯವರಿಗೆಲ್ಲ ಆಶ್ಚರ್ಯ, ಸಂತೋಷ. ಅವಳ ದಹನ ಉತ್ತರಕ್ರಿಯಾದಿಗಳಿಗೆ ಲೋಪವಾಗಲಿಲ್ಲ. ಬೀದಿಯವರೆಲ್ಲರೂ ಸಹಕರಿಸಿ ಆ ಕಾರ್ಯಗಳನ್ನು ಸಾಂಗವಾಗಿಯೇ ನೆರವೇರಿಸಿದರು. ಭಾಗೀರಥಮ್ಮನ ಕಿವಿಯಲ್ಲಿದ್ದ ಓಲೆಗಳಿಂದ ಐವತ್ತು ರೂಪಾಯಿ ದೊರಕಿತು. ಅವಳ ಕಿರುಕೋಣೆಯನ್ನು ಶೋಧಿಸಿದಾಗ ಒಂದು ಮಡಕೆಯ ತುಂಬ ಇಪ್ಪತ್ತು ಮೂವತ್ತು ರೂಪಾಯಿಗಳಷ್ಟು ಚಿಲ್ಲರೆ ನಾಣ್ಯಗಳು ದೊರಕಿದವು. ಈ ಧನಸಂಗ್ರಹಣ ಬುದ್ಧಿಯನ್ನು ಬಹುಶಃ ಅವಳಿಗೆ ಗುಂಡಪ್ಪ ಕಲಿಸಿಕೊಟ್ಟಿರಬೇಕೆಂದು ನಮ್ಮ ತಂದೆಯ ಎಣಿಕೆ. ಅದು ಹೇಗಾದರೂ ಇರಲಿ. ಅಂತೂ ಆಕೆಯ ಉತ್ತರಕ್ರಿಯಾದಿಗಳಿಗೆ ಬೀದಿಯವರಿಗೆ ವೆಚ್ಚವೇನೂ ತಗುಲಲಿಲ್ಲ. ಬೀದಿಯ ಜನರೇ ಶವವನ್ನು ಹೊತ್ತೂ ಹಾಕಿದರು. ನಮ್ಮ ತಂದೆಯೂ ಒಬ್ಬ ವಾಹಕರಾಗಿದ್ದರು. ಗಂಡ ಇದ್ದಿದ್ದರೆ ಹೇಗೋ ಹಾಗೆ ವೈಕುಂಠ ಸಮಾರಾಧನೆಯೂ ನಡೆಯಿತು. ನಮ್ಮ ಬೀದಿಯ 'ಜಗಲಿ ಜೋಯಿಸರು' ಈ ಕಾರ್ಯಗಳಲ್ಲೆಲ್ಲ ಮುಂದಾಳಾಗಿದ್ದರು.

ಈ ಸಂದರ್ಭದಲ್ಲೆಲ್ಲ ಒಂದು ಚರ್ಚೆ ಎದ್ದಿತ್ತು. ನಮ್ಮ ತಂದೆ ಅವಳ ಸಂಸ್ಕಾರ ಮುತ್ತೈದೆಗೆ ಹೇಗೋ ಹಾಗೆ ನಡೆಯಬೇಕೆಂದು ವಾದಿಸಿದರು. ಬೀದಿಯ ಹಲವು ಪ್ರಮುಖರು ಇದನ್ನು ಒಪ್ಪಲಿಲ್ಲ. ಬಹಳ ವಾದ ವಿವಾದಗಳಾದ ಮೇಲೆ ನಮ್ಮ ತಂದೆಯ ವಾದವೇ ಗೆದ್ದಿತು. ನಿಜವಾಗಿ ಗೆದ್ದದ್ದು ನಮ್ಮ ತಂದೆಯ ಹಟವಲ್ಲ ; ಗುಂಡಪ್ಪನ ಹೆಸರು. "ಗುಂಡಪ್ಪ ಬದುಕಿದ್ದಾಗ, 'ಶೇಷಗಿರಿ ಸತ್ತಿಲ್ಲ. ಭಂಡ ಬಾಳು ಬದುಕುವವರು ದೀರ್ಘಾಯುಗಳು. ಅವನು ಎಲ್ಲಿಯೋ ಇದ್ದಾನೆ. ಭಾಗೀರಥಮ್ಮ ಸತ್ತರೆ ಅವಳಿಗೆ ಮುತ್ತೈದೆಯ ಹಾಗೆಯೇ ಸಂಸ್ಕಾರ ಮಾಡಬೇಕು. ಹಣದ ವಿಚಾರ ಯೋಚನೆ ಮಾಡಬೇಕಾಗಿಲ್ಲ' ಎಂದು ಹೇಳುತ್ತಿದ್ದ" ಎಂಬುದಾಗಿ ನಮ್ಮ ತಂದೆ ಗುಂಡಪ್ಪನ ಅಂತರಾತ್ಮಬೋಧೆಯ ಪ್ರಮಾಣವನ್ನು ಮುಂದಿಟ್ಟರು. ಭಾಗೀರಥಮ್ಮನ ಮರಣಕಾಲದ ಆಧಾರದ ಮೇಲೆ ಗುಣಿಸಿ, ಜಗಲಿ ಜೋಯಿಸರು ತಮ್ಮ ಜ್ಯೋತಿಶ್ಶಾಸ್ತ್ರಜ್ಞಾನದ ಪ್ರಮಾಣವನ್ನೂ ಜೊತೆಗಿಟ್ಟರು. ಎಲ್ಲರೂ ಒಪ್ಪಿದರು.

೬

ಕೆಲವು ವರ್ಷ ಸಂದ ಮೇಲೆ, ನಮ್ಮೆಲ್ಲರ ಆಶ್ಚರ್ಯಕ್ಕೆ, ಶೇಷಗಿರಿ ಹಿಂದಿರುಗಿದ. ಅವನ ಜೊತೆ ಸುಭದ್ರೆ ಇರಲಿಲ್ಲ; ಹನ್ನೆರಡು ವರ್ಷದ ಹುಡುಗಿ

ಇದ್ದಳು. ಅವಳು ಶೇಷಗಿರಿಯ ಮಗಳು ಎಂದು ಆಮೇಲೆ ಗೊತ್ತಾಯಿತು.

"ಸುಭದ್ರೆ ಹೆಣ್ಣು ಮಗು ಹೆತ್ತು ಸತ್ತುಹೋದಳು. ತಬ್ಬಲಿ ಮಗುವನ್ನು ಸಾಕಿ ಸಲಹಲು ಬಹಳ ಕಷ್ಟಪಟ್ಟೆ. ದೇಶ ದೇಶ ಅಲೆದೆ. ಮಗಳು ಬೆಳೆದು ದೊಡ್ಡವಳಾದಳು. ನನ್ನ ಹೆಂಡತಿಗೆ ನಾನು ಬಹಳ ದ್ರೋಹಮಾಡಿದೆ. ಅವಳು ಬದುಕಿದ್ದರೆ ಕಡೆಗಾಲದಲ್ಲಿಯಾದರೂ ಅವಳ ಸೇವೆ ಮಾಡಿ, ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳೋಣ ಎಂದು ಹಿಂದಿರುಗಿ ಬಂದೆ. ಅವಳು ಪುಣ್ಯ ಮಾಡಿದ್ದಳು; ತೀರಿಕೊಂಡಳು" ಎಂದು ನಮ್ಮ ತಂದೆಯ ಮುಂದೆ ಕೊರಗಿ ಮರುಗಿದ.

ಶೇಷಗಿರಿ ನಮ್ಮ ಬೀದಿಯ ಹಿಂದಿನ ಬೀದಿಯಲ್ಲಿ ಒಂದು ಕೊಠಡಿಯನ್ನು ಬಾಡಿಗೆಗೆ ಗೊತ್ತುಮಾಡಿಕೊಂಡು ಮಗಳೊಡನೆ ವಾಸಮಾಡತೊಡಗಿದ. ಮೊದಲು ಮಗಳಿಗೆ ಏನು ಹೆಸರಿಟ್ಟಿದ್ದನೋ ಗೊತ್ತಿಲ್ಲ. ಊರಿಗೆ ಹಿಂದಿರುಗಿ ದಂದಿನಿಂದ ಅವಳನ್ನು ಭಾಗೀರಥಿ ಎಂದೇ ಕರೆಯುತ್ತಿದ್ದ.

ಭಾಗ್ಯಹೀನೆ ಭಾಗೀರಥಮ್ಮ ಬಹು ಪುಣ್ಯವಂತೆ ಎಂದೇ ನನ್ನ ಭಾವನೆ. ಮೊದ್ದಾಗಿದ್ದ ಅವಳು ಬದುಕಿದ್ದಾಗ ಗಂಡನಿಗೆ ಬೇಡವೆನಿಸಿ, ಸತ್ತು ಗಂಡನ ಹೃದಯವನ್ನು ಗೆದ್ದಳು. ಇದೊಂದು ಪವಾಡ; ನಂಬಲಾಗದ ಸತ್ಯ.

# ಜಗಲಿ ಜೋಯಿಸರು

ನಮ್ಮ ಬೀದಿಯಲ್ಲಿ ನಮ್ಮ ಮನೆಯಿಂದ ಮೂರು ಮನೆ ಬಿಟ್ಟು ಆಚೆಯ ಮನೆಯ ಜಗಲಿ ಒಂದು ಕಾಲದಲ್ಲಿ ಸುತ್ತಮುತ್ತಣ ಪಾಮರಜನದ ಭವಿಷ್ಯವನ್ನು ನಿರ್ಣಯಿಸುವ ಮಹತ್ವಪೂರ್ಣ ಕ್ಷೇತ್ರವೆಂದೆನಿಸಿತ್ತು. ಅಲ್ಲಿ ಪ್ರತಿದಿನ ಬೆಳಗ್ಗೆ ೮ ರಿಂದ ೧೨ರ ವರೆಗೂ ಮಧ್ಯಾಹ್ನಾತ್ಪರ ೨ ರಿಂದ ಸಂಜೆ ೬ರ ವರೆಗೂ ಯಾರೇ ಆದರೂ ವೀರಪದ್ಮಾಸನಾಸೀನರಾದ 'ಮಹಾದೇವಶಾಸ್ತ್ರಿ'ಗಳನ್ನು ಕಾಣಬಹುದಾಗಿತ್ತು. ಅವರ ನಿಜ ನಾಮಧೇಯ ನಂಜುಂಡಶಾಸ್ತ್ರೀ ಎಂದಾದರೂ ನಮ್ಮ ಬೀದಿಯವರಿಗೆ ಮಾತ್ರ ಅವರು ಮಹಾದೇವ ಶಾಸ್ತ್ರಿಗಳು. ಕಾರಣವಿಷ್ಟೆ : ಎದ್ದರೆ ಕುಳಿತರೆ, ನಿಂತರೆ ನಡೆದರೆ, ಕೆಮ್ಮಿದರೆ ಆಕಳಿಸಿದರೆ, ನೊಂದರೆ ನಲಿದರೆ–ನಿಮಿಷಕ್ಕೊಂದು ಸಲ 'ಶಂಭೋ ಮಹಾದೇವ, ಶಂಭೋ ಮಹಾದೇವ' ಎಂಬ ದಿವ್ಯ ನಾಮವನ್ನು ಉಚ್ಚರಿಸುತ್ತಲೇ ಇದ್ದರು. ಬೀದಿಯ ಬಾಲವಿಲ್ಲದ ವಾನರ ಮಂಡಲಿಗೆ 'ಮಹಾದೇವ' ಎಂಬ ಎರಡನೆಯ ಶಬ್ದವೊಂದು ಮಾತ್ರ ಪದೇಪದೇ ಕಿವಿಗೆ ಹೊಡೆದಂತೆ ಬಿದ್ದು ಬಿದ್ದು, ಆ ಬಾಲಪ್ರಪಂಚಕ್ಕೆ ಮೊದಲು ಅವರು ಮಹಾದೇವ ಶಾಸ್ತ್ರಿಗಳಾದರು ; ಕಾಲಕ್ರಮದಲ್ಲಿ ಹಿರಿಯರೂ ಕೂಡ ಅವರನ್ನು ಹಾಗೆಂದೇ ಸಂಬೋಧಿಸತೊಡಗಿದರು. ಈ ನಾಮಪರಿವರ್ತನೆಯಿಂದ ಅವರು ಬಗೆಗೆಟ್ಟಂತೆ ತೋರಲಿಲ್ಲ. ಸುತ್ತಮುತ್ತಣ ಜನಕ್ಕೇನೋ ಅವರು 'ಜಗಲಿ ಜೋಯಿಸ'ರೆಂದೇ ಪ್ರಸಿದ್ಧರು. ಇದಕ್ಕೆ ಕಾರಣ ಸ್ವಯಂವೇದ್ಯವಾಗಿಯೇ ಇದೆ.

'ಜಗಲಿ ಜೋಯಿಸರ' ವ್ಯಕ್ತಿಸ್ವರೂಪದ ಸಮ್ಯಗ್ದರ್ಶನವನ್ನು ಅರಿಯಬೇಕಾದರೆ ಅವರು ಜಗಲಿಯಮೇಲೆ ಕುಳಿತಿರುವಾಗ ನೋಡಬೇಕು : ಸಾಕ್ಷಾತ್ ಪರಮೇಶ್ವರನೇ ! ಲಲಾಟದಲ್ಲಿ ಮೆರೆಯುವ ಆ ತ್ರಿಪುಂಡ್ರ ; ಅರೆನರೆತರೂ ತಕ್ಕಮಟ್ಟಿಗೆ ವಿಪುಲವಾಗಿದ್ದು, ನೆತ್ತಿಯಮೇಲೆ ನೆಟ್ಟನೆ ನಿಂತು ಜಟಾಜೂಟದಂತೆ ಕಂಗೊಳಿಸುವ ಶಿಖೆ ; ಹೆಗಲಮೇಲೆ ಹಾದು ವಕ್ಷಸ್ಥಲದಮೇಲೆ ವಿಭ್ರಾಜಮಾನವಾದ ಮುಪ್ಪುರಿಯ ಯಜ್ಞೋಪವೀತ ; ಇವೆಲ್ಲಕ್ಕೂ ಒಂದು ಬಗೆಯ

ಪಾವಿತ್ರ್ಯದ ಕಳೆಕೊಡುವ ರುದ್ರಾಕ್ಷಿ ಮತ್ತು ಸ್ಫಟಿಕ ಮಣಿಮಾಲೆಗಳು ; ಕೆಳಗೆ ಕೃಷ್ಣಾಜಿನದ ಹಾಸು ; ಮುಂದುಗಡೆ ಸೊಗಸಾದ ವ್ಯಾಸಪೀಠ, ಅದರ ಮೇಲೆ ಭಗವದ್ಗೀತೆ ರಾಮಾಯಣ ಪ್ರತಿಗಳು ; ಪಕ್ಕದಲ್ಲಿ, ಜ್ಯೋತಿಷ್ಯ ಸಂಬಂಧ ವಾದ ಗ್ರಂಥರಾಶಿ. ಭಕ್ತಿಭಾವದಿಂದ ನೆನೆಯುತ್ತಿರುವ ನನಗೆ ಈ ಚಿತ್ರ ಈಗಲೂ ಕಣ್ಣಿಗೆ ಕಟ್ಟಿದಂತೆ ಕಾಣುವುದು.

ಮಹಾದೇವ ಶಾಸ್ತ್ರಿಗಳ ಎಂದರೆ ಈ ಜಗಲಿ ಜೋಯಿಸರ ಪಿತಾಮಹರು (ಅವರ ಹೆಸರೂ ನಂಜುಂಡಶಾಸ್ತ್ರಿಗಳೇ) ಮುಮ್ಮಡಿ ಕೃಷ್ಣರಾಜ ಒಡೆಯರವರ ವಿಶೇಷಾನುಗ್ರಹಕ್ಕೆ ಒಮ್ಮೆ ಪಾತ್ರರಾದರಂತೆ. ತಮ್ಮ ಅಜ್ಜನವರ ಮಹಿಮಾ ವಿಶೇಷವನ್ನು ಜಗಲಿ ಜೋಯಿಸರು ಕಂಡವರಿಗೆ ಕಾಣದವರಿಗೆ ಪದೇಪದೇ ಎಷ್ಟು ಸಲ ಬಣ್ಣಿಸಿ ಹೇಳಿದರೂ ತಣಿಯುತ್ತಿರಲಿಲ್ಲ. ಅವರ ಬಾಯಿಂದ ಆ ಸಂಗತಿಯನ್ನು ನಮ್ಮ ಗುಮಾಸ್ತೆ ಗುಂಡಪ್ಪ ನೂರು ಸಲ ಕೇಳಿದ್ದಾನಂತೆ. ಇವನ ಬಾಯಿಂದ ಕೇಳಿದ್ದನ್ನು ನಾನು ಇಲ್ಲಿ ಹೇಳುತ್ತೇನೆ.

ನಂಜುಂಡ ಶಾಸ್ತ್ರಿಗಳು (ಜಗಲಿ ಜೋಯಿಸರ ಅಜ್ಜ) ಸಂಸ್ಕೃತ ವಿದ್ಯೆ ಯಲ್ಲಿ ಪಾರಂಗತರಂತೆ. ಸಾಹಿತ್ಯವಲ್ಲದೆ, ವೇದಾಂತ, ತರ್ಕ, ಮೀಮಾಂಸೆ, ಜೊತೆಗೆ ಜ್ಯೋತಿಷ್ಯ ಇವೆಲ್ಲವುಗಳಲ್ಲಿಯೂ ಗಟ್ಟಿಗರಂತೆ. ಆದರೂ ಇತರರಿಗೆ ದೊರಕಿದ್ದಂತೆ ಇವರಿಗೆ ಅದೇಕೋ ಮಹಾಪ್ರಭುಗಳ ಆಸ್ಥಾನದಲ್ಲಿ ಒಂದು ಸ್ಥಾನ ದೊರಕಿರಲಿಲ್ಲ. ಅರಮನೆಯ ಆಶ್ರಯವನ್ನು ದೊರಕಿಸಿಕೊಳ್ಳುವ ಅನುನಯ ಕಲೆಯಲ್ಲಿ ಮಾತ್ರ ಅವರಿಗೆ ಪರಿಶ್ರಮವಿರಲಿಲ್ಲವಂತೆ ; ಅಲ್ಲದೆ, ಅದನ್ನು ಅವರು ಬಯಸಿದವರೂ ಅಲ್ಲವಂತೆ. ಆದ್ದರಿಂದ, ಉದರಂಭರಣಕ್ಕಾಗಿ ವೈದಿಕ ವೃತ್ತಿಯನ್ನೂ ಜ್ಯೋತಿಷ್ಯವನ್ನೂ ಅವಲಂಬಿಸಿದ್ದರು. ಜ್ಯೋತಿಷ್ಯದಲ್ಲಿ ಅವರು ನಿಸ್ಸೀಮರು. 'ನಂಜುಂಡ ಶಾಸ್ತ್ರಿಗಳು ಹೇಳಿದರೆಂದಮೇಲೆ ನಡೆಯದೆ ಇದ್ದೀತೆ' ಎಂಬುದು ಊರಮಾತಾಗಿತ್ತು. ಅವರ ವಾಕ್ಸಿದ್ಧಿ ಅಪ್ರತಿಮವಾಗಿತ್ತು. ಅವರು ಕೇವಲ ಸತ್ಯನಿಷ್ಠರು ; ಇದ್ದುದನ್ನು ಇದ್ದಂತೆ ಹೇಳಿಬಿಡುತ್ತಿದ್ದರು. ಪ್ರಿಯವಾದ ಸತ್ಯವನ್ನು ನುಡಿದು, ಅಪ್ರಿಯವಾದುದನ್ನು ಮುಚ್ಚಿ ಹೇಳುವ ಅಥವಾ ಪ್ರಿಯವಾಗು ವಂತೆ ಹೇಳುವ ಜ್ಯೋತಿಷ್ಯ ವೃತ್ತಿಯವರ ಚಳಕು ಅವರಿಗಿರಲಿಲ್ಲ. ಆದ್ದರಿಂದ ಅವರ ಜ್ಯೋತಿಷ್ಯ ಜನಪ್ರಿಯವಾಗದೆ ಅವರ ತಲೆಬುರುಡೆಯಲ್ಲೇ ಅಡಗಿತ್ತು.

ಈ ನಂಜುಂಡಶಾಸ್ತ್ರಿಗಳಿಗೆ ಒಮ್ಮೆ ಪ್ರಭುದರ್ಶನ ಮಾಡಬೇಕೆಂದು ಇದ್ದಕ್ಕಿದ್ದ ಹಾಗೆ ಉತ್ಕಟವಾದ ಅಪೇಕ್ಷೆಯಾಯಿತಂತೆ. ಅದಕ್ಕೆ ಕಾರಣವೂ ಇತ್ತು. ಆಹ್ವಾನವಿಲ್ಲದೆ ಹೇಗೆ ಹೋಗುವುದು ? ಆದರೆ ಅವರು ಆಹ್ವಾನಕ್ಕೆ ಕಾಯಲಿಲ್ಲ, ಕೈನೀಡಲಿಲ್ಲ. ನವರಾತ್ರಿಯ ಪಾಡ್ಯದ ಪ್ರಾತಃಕಾಲ, ಫಲ

ಮಂತ್ರಾಕ್ಷತೆ ತೆಗೆದುಕೊಂಡು ವೈದಿಕಮಂಡಲಿಯೊಂದಿಗೆ ಅರಮನೆಯ ಒಳ
ತೊಟ್ಟಿಗೆ ನುಗ್ಗಿಯೇ ಬಿಟ್ಟರು. ಇತರ ವೈದಿಕವಿದ್ವಾಂಸ ಕವಿ ಮಂಡಲಿಯವರೆಲ್ಲರೂ
'ರಾಜಸ'ವಾದ ವೈದಿಕ ವೇಷದಲ್ಲಿ ದಯಮಾಡಿಸಿದ್ದರು ; ನಂಜುಂಡಶಾಸ್ತ್ರಿಗಳು
ಕೇವಲ ಸಾತ್ತ್ವಿಕವೇಷದಲ್ಲಿ ಹೋಗಿದ್ದರು. ವೈದಿಕ ಮಂಡಲಿಯಲ್ಲಿ ಹಲವರಿಗೆ
ಇವರ ಪರಿಚಯವಿದ್ದರೂ ಯಾರೂ ಇವರನ್ನು ಆದರದಿಂದ ಮಾತಾಡಿಸಲಿಲ್ಲ ;
ತಿರಸ್ಕಾರದಿಂದ ದುರುಗುಟ್ಟಿಕೊಂಡು ನೋಡುತ್ತಿದ್ದರು. ನಂಜುಂಡಶಾಸ್ತ್ರಿಗಳು
ಇದರಿಂದ ಕುಗ್ಗಲಿಲ್ಲ ; ಎಲ್ಲರಿಗೂ ಅಗ್ರಗಾಮಿಯಾಗಿ ಮುಂದೆ ನಡೆದರು.
ಆಸ್ಥಾನಮಂಟಪದ ಬಾಗಿಲನ್ನು ಸಮೀಪಿಸಿದಾಗ, 'ಅಸಾಧಾರಣ' ವೇಷದ ಈ
ವೈದಿಕ ವ್ಯಕ್ತಿಯನ್ನು ಕಟ್ಟಿಗೆಯವನು ತಡೆದನು ; ಆಚೆಗೆ ಕಳುಹಿಸುವುದಕ್ಕೂ
ಉದ್ಯುಕ್ತನಾದನು. 'ಹೆಚ್ಚು ಮಾತಾಡಿದರೆ, ಮುಟ್ಟಿದರೆ, ನಿನ್ನನ್ನು ಭಸ್ಮ
ಮಾಡಿಬಿಡುತ್ತೇನೆ' ಎಂದು ದೂರ್ವಾಸ ಮುನಿಗಳ ಅಪರಾವತಾರರಾದರಂತೆ
ನಂಜುಂಡಶಾಸ್ತ್ರಿಗಳು. ಕಟ್ಟಿಗೆಯವನು ಕಟ್ಟಿಗೆಯನ್ನು ಕಂಕುಳಿಗೆ ಸೇರಿಸಿ
ಕೈಮುಗಿದು ಅವರನ್ನು ಒಳಕ್ಕೆ ಬಿಟ್ಟನಂತೆ. ನಂಜುಂಡಶಾಸ್ತ್ರಿಗಳು ಫಲ
ಮಂತ್ರಾಕ್ಷತೆ ಹಿಡಿದು ಮಹಾಪ್ರಭುಗಳ ಮುಂದೆ ನಿಂತರು. ಈ ವ್ಯಕ್ತಿ ಪರಿಚಿತ
ವ್ಯಕ್ತಿಯಲ್ಲ ; ವೇಷವೂ ಅಸಾಧಾರಣವಾಗಿ ಸಾಧಾರಣ. ಇವರ ಧಾರ್ಷ್ಟ್ಯಕ್ಕೆ
ಮಹಾಪ್ರಭುಗಳಿಗೆ ಮೆಚ್ಚಿಗೆಯೇ ಆಯಿತೆಂದು ಕಾಣುತ್ತದೆ. ಮಂದಹಾಸ
ಯುಕ್ತರಾಗಿ ಪ್ರಶ್ನಿಸಿದರು :

"ತಾವು ಯಾರು, ನಮಗೆ ಪರಿಚಯವಿದ್ದಹಾಗೆ ನೆನಪಿಲ್ಲ ?"

"ನನ್ನ ಪರಿಚಯವನ್ನು ಹೇಳಿಕೊಳ್ಳುವುದಕ್ಕೆ ಬರಲಿಲ್ಲ, ಮಹಾಪ್ರಭು.
ಕರ್ಮನಿಷ್ಠರಾದ ಬ್ರಾಹ್ಮಣರಿಗೆಲ್ಲ ಮಹಾಪ್ರಭುಗಳನ್ನು ಆಶೀರ್ವದಿಸುವ ಅಧಿಕಾರ
ಸ್ವಯಂಪ್ರಾಪ್ತವಾದುದು. ನಾನು ಕರ್ಮನಿಷ್ಠನಾದ ಬ್ರಾಹ್ಮಣ. ಮಹಾ
ಪ್ರಭುಗಳಿಗೆ ಫಲ ಮಂತ್ರಾಕ್ಷತೆಯನ್ನೊಪ್ಪಿಸಿ, ಆಶೀರ್ವದಿಸಬೇಕೆಂದು
ಪರಮೇಶ್ವರನ ಅಪ್ಪಣೆಯಾಯಿತು. ಮೊದಲು, ಪರಮೇಶ್ವರಾನುಗ್ರಹಯುಕ್ತ
ವಾದ ಈ ಫಲಮಂತ್ರಾಕ್ಷತೆಯನ್ನು ನನ್ನ ಹಸ್ತದ್ವಾರಾ ಸ್ವೀಕರಿಸೋಣವಾಗಲಿ.
ತದನಂತರ, ನನ್ನ ಬಿನ್ನಪವೊಂದುಂಟು. ಅದನ್ನು ಅರಿಕೆಮಾಡಿಕೊಳ್ಳುತ್ತೇನೆ."

ಮಹಾಪ್ರಭುಗಳು ಫಲಮಂತ್ರಾಕ್ಷತೆಯನ್ನು ಒಪ್ಪಿಸಿಕೊಂಡು, "ಅದೇನು
ಕೇಳಬಹುದೆ ?" ಎಂದು ಕುತೂಹಲದಿಂದ ಪ್ರಶ್ನಿಸಿದರು. ಇತರ ವೈದಿಕರೆಲ್ಲ
ದೂರದಲ್ಲಿ ಬೆರಗಾಗಿ ನಿಂತು ನೋಡುತ್ತಿದ್ದರು.

"ಮಹಾಪ್ರಭು, ತಮ್ಮ ಸಿಂಹಾಸನ ಈಗ ಭದ್ರಾಸನವಲ್ಲ."

ಮಹಾಪ್ರಭುಗಳು ನಕ್ಕು ನುಡಿದರಂತೆ : "ಅದು ನಮಗೂ ಅರಿವಿ

ಗೊಂಡಿದೆ" ಎಂದು, ತಮ್ಮ ಕಿರುಬೆರಳಿನ ಪಚ್ಚೆಯುಂಗುರವನ್ನು ನಂಜುಂಡ ಶಾಸ್ತ್ರಿಗಳ ಕೈಗೆ ಹಾಕಿದರಂತೆ.

"ಮಹಾಪ್ರಭುಗಳ ಶ್ರೇಯಃಪ್ರಾರ್ಥನೆಯನ್ನು ಅನುದಿನವೂ ಮಾಡುತ್ತಿರಲು ನನಗೆ ಜ್ಞಾಪಕಕೊಡುತ್ತಿರುವುದಕ್ಕಾಗಿ ಈ ಅಭಿಜ್ಞಾನವನ್ನು ಸ್ವೀಕರಿಸುವೆನು. ನಾನು ಶ್ಲೇಷಾರ್ಥ ಚಮತ್ಕಾರ ವಚನವನ್ನು ನುಡಿದಿಲ್ಲ; ಯಥಾರ್ಥವನ್ನು ನುಡಿದಿದ್ದೇನೆ" ಎಂದು ಹೇಳಿ, ನಂಜುಂಡಶಾಸ್ತ್ರಿಗಳು ದಡದಡನೆ ಹೊರಟು ಹೋದರಂತೆ.

ಗುಮಾಸ್ತೆ ಗುಂಡಪ್ಪನಿಗೆ ಜಗಲಿ ಜೋಯಿಸರ ಜ್ಯೋತಿಷ್ಯದಲ್ಲಿ ತುಂಬ ವಿಶ್ವಾಸವಿತ್ತಾದರೂ ಈ ಕಥೆಯನ್ನು ಮಾತ್ರ ನಂಬುತ್ತಿರಲಿಲ್ಲ. ನಾನಂತೂ ಇದರ ವಿಷಯವಾಗಿ ಏನೂ ಹೇಳಲಾರೆ. ಅಂತೂ, ಜಗಲಿ ಜೋಯಿಸರ ಕಿರು ಬೆರಳಿನಲ್ಲಿ ಒಂದು ಪವಿತ್ರದ ಉಂಗುರವಿತ್ತು. "ಇದೇ ನಮ್ಮ ಅಜ್ಜನ ಉಂಗುರ. ನಮ್ಮ ತೀರ್ಥರೂಪರ ಕಾಲದಲ್ಲಿ ಪಚ್ಚೆ ಎಲ್ಲಿಯೋ ಕಳಚಿ ಕಳೆದುಹೋಯಿತು. ಅವರು ಅದನ್ನು ಹಾಗೆಯೇ ಧರಿಸಿದ್ದರು. ನಾನು ಅದನ್ನು ಪವಿತ್ರದುಂಗುರವಾಗಿ ಮಾಡಿಕೊಂಡೆ. ಇದೇ ಆ ಉಂಗುರ ನೋಡಿ" ಎಂದು ಜಗಲಿ ಜೋಯಿಸರು ತಮ್ಮ ಅಜ್ಜನವರನ್ನು ಕುರಿತ ಮೇಲ್ಕಂಡ ಕಥೆಯನ್ನು ಹೆಮ್ಮೆಯಿಂದ ಹೇಳಿ, ಇಮ್ಮಡಿಯ ಹೆಮ್ಮೆಯಿಂದ ಆ ಉಂಗುರವನ್ನು ತೋರಿಸುತ್ತಿದ್ದರು.

ಜಗಲಿ ಜೋಯಸರ ತಂದೆ ವಿದ್ವಾಂಸರಾಗಿರಲಿಲ್ಲ. "ನಮ್ಮ ತೀರ್ಥರೂಪರವರು ಅಂತಹ ಪ್ರಚಂಡ ವಿದ್ವಾಂಸರಾಗಿದ್ದರೂ ಅವರ ವಿದ್ಯೆ ಪ್ರಕಾಶಕ್ಕೆ ಬರಲಿಲ್ಲ. ಪ್ರಕಾಶಕ್ಕೆ ಬಾರದ ವಿದ್ಯೆಯಿಂದ ಏನು ಪ್ರಯೋಜನ ?" ಎಂಬುದಾಗಿ ಅವರು ತಾವು ವಿದ್ಯಾವಂತರಾಗದಿದ್ದುದಕ್ಕಾಗಿ ಸಮಾಧಾನಪಟ್ಟುಕೊಳ್ಳುತ್ತಿದ್ದರಂತೆ. ಆದರೂ, ಪ್ರಯೋಗ ಭಾಗಕ್ಕೆ ಅವಶ್ಯವಾದಷ್ಟು ಸಂಸ್ಕೃತವನ್ನು ಕಲಿತಿದ್ದರು. ಅವರ ವೃತ್ತಿಯೂ ಚೆನ್ನಾಗಿಯೇ ನಡೆಯುತ್ತಿತ್ತು. ನಮ್ಮ ಅಗ್ರಹಾರದಲ್ಲಿ ಒಂದು ಸಣ್ಣ ಮನೆಯನ್ನೂ ಕೊಂಡರು. ತಮ್ಮ ಮಗನಿಗೂ ಪ್ರಯೋಗವನ್ನು ಕಲಿಸಿದರು. ಹೆಚ್ಚಿನ ಸಂಸ್ಕೃತ ವಿದ್ಯೆ ಕಲಿಸಲಿಲ್ಲ.

ಜಗಲಿ ಜೋಯಿಸರ ಪಿತ್ರಾರ್ಜಿತ ಆಸ್ತಿಯೆಂದರೆ, ಒಂದು ಸಣ್ಣ ಮನೆ ಮತ್ತು ತಮ್ಮ ತಂದೆಯ ವೃತ್ತಿಗೆ ಬಂದಿದ್ದ ಕೆಲವು ಗೃಹಸ್ಥರ ಮನೆಗಳ ಶುಭಾಶುಭ ಕಾರ್ಯಗಳ ಗುತ್ತಿಗೆ. ತಮ್ಮ ತಂದೆ ತೀರಿಹೋದ ಮೇಲೆ ಜಗಲಿ ಜೋಯಿಸರು ವೃತ್ತಿಯನ್ನು ಹಿಡಿದು ನಡಸಿಕೊಂಡು ಬರುತ್ತಿದ್ದರೂ, ಅವರಿಗೆ ತಮ್ಮ ಅಜ್ಜನಂತೆ ವಿದ್ವಾಂಸರಾಗಬೇಕೆಂಬ ಹೆಬ್ಬಯಕೆ ಹುಟ್ಟಿತು. ಸಂಸ್ಕೃತ ಪಾಠಶಾಲೆಗೆ ಸೇರಿ ವಿದ್ಯಾರಂಭಮಾಡಲು ವಯಸ್ಸು ಮೀರಿದೆಯೆಂದು

ಭಾವಿಸಿದರು;ಇತರ ವಿದ್ವಾಂಸರನ್ನು ಆಶ್ರಯಿಸಿ ಕಲಿಯಲು ಅದೇನೋ ಸಂಕೋಚ. ಹೀಗಾಗಿ, ತಮ್ಮ ಹೆಬ್ಬಯಕೆ ಹಣ್ಣಾಗಲು ಉಪಾಯವೇನೆಂದು ಯೋಚಿಸ ತೊಡಗಿದರು. ತಮ್ಮ ಅಜ್ಜನ ಆಸ್ತಿಯಾಗಿ ಮನೆಯಲ್ಲಿ ಒಂದು ಗ್ರಂಥ ರಾಶಿಯೇ ಇದ್ದಿತು. ಅವುಗಳನ್ನೆಲ್ಲಾ ಸ್ವಂತವಾಗಿ ವ್ಯಾಸಂಗ ಮಾಡುವ ಮಹೋದ್ಯಮಕ್ಕೆ ಕೈ ಹಾಕಿದರು. ಎಷ್ಟೋ ಗ್ರಂಥಗಳ ತಲೆ ಬಾಲಗಳೂ ಅವರಿಗೆ ಗೊತ್ತಾಗಲಿಲ್ಲ. ಆದರೆ, ರಾಮಾಯಣ ಭಾರತ ಭಾಗವತ ಭಗವದ್ಗೀತೆ ಗಳು ನಿತ್ಯವಾಚನಾನುಷ್ಠಾನಗಳ ಪರಿಣಾಮವಾಗಿ ಅವರಿಗೆ ಸ್ವಾಧೀನವಾಗ ತೊಡಗಿದವು; ಜೊತೆಗೆ, ಜ್ಯೋತಿಷ್ಯ ಗ್ರಂಥಗಳಲ್ಲಿ ವಿಶೇಷಾಸಕ್ತಿ ಮೂಡಿ, ಅವುಗಳ ವ್ಯಾಸಂಗಕ್ಕೆ ತೊಡಗಿದರು. ಪಿತಾಮಹರ ಜ್ಯೋತಿಷ್ಯ ಪ್ರತಿಭೆ ಅವರ ರಕ್ತದಲ್ಲಿ ಇಳಿದು ಬಂದಿತ್ತೆಂದು ಕಾಣುತ್ತದೆ! ಕೆಲವಾರು ವರ್ಷಗಳಲ್ಲಿ ಆ ಗ್ರಂಥ ಗಳನ್ನೆಲ್ಲ ಸ್ವಾಧೀನಪಡಿಸಿಕೊಂಡು ಜ್ಯೋತಿಷ್ಯದಲ್ಲಿ ಖಚಿತವಾದ ಜ್ಞಾನ ಸಂಪಾದನೆ ಮಾಡಿದರು. ತಮ್ಮ ತಂದೆ ಬರಸಿದ್ದ ತಮ್ಮ ಏಕಮಾತ್ರ ಪುತ್ರಿಯ ಜಾತಕ ಕಳೆದು ಹೋಗಿತ್ತು; ಅದನ್ನು ಮತ್ತೆ ತಾವೇ ಬರೆದು ಇತರ ಜ್ಯೋತಿಷ್ಕರಿಗೆ ತೋರಿಸಿದರು. ಅವರು ಸರಿಯಾಗಿದೆ ಎಂದದ್ದರಿಂದ ತಮ್ಮ ಜ್ಞಾನ ಒರೆಗೆ ಹಚ್ಚಿದಂತಾಗಿ, ಜೋಯಿಸರಿಗೆ ಧೈರ್ಯ ಬಂದಿತು. ತಮ್ಮ ಜಾತಕ, ತಮ್ಮ ಮಗಳ ಜಾತಕ–ಇವುಗಳ ಫಲಾಫಲಗಳನ್ನು ಗುಣಿಸಿ ಬರೆದಿಟ್ಟರು. ನಡೆದ ಘಟನೆಗಳಿಂದ ಅವು ತಾಳೆಯಾದುವು. ಅವರಿಗೆ ತಮ್ಮ ವೈದುಷ್ಯದಲ್ಲಿ ಸಂಪೂರ್ಣ ಆತ್ಮವಿಶ್ವಾಸವುಂಟಾಗಿ, ಇತರರಿಗೂ ಜಾತಕ ಬರೆದುಕೊಡುವುದು, ಜಾತಕಫಲ ಹೇಳುವುದು–ಇವಕ್ಕೆ ಮೊದಲು ಮಾಡಿದರು. ಇವರ ಬಲ್ಮೆ ಕಾಲಕ್ರಮದಲ್ಲಿ ಪ್ರಕಟವಾಗಿ ಗಟ್ಟಿಗರಾದ ಜೋಯಿಸರೆಂದು ಖ್ಯಾತಿವೆತ್ತರು. ಈ ಹೊಸ ಹವ್ಯಾಸ ಅಂಟಿಕೊಂಡು, ವೈದಿಕ ವೃತ್ತಿ ಹಿಂದೆ ಬಿತ್ತು. ಆದ್ದರಿಂದ, ನೂತನ ವೃತ್ತಿಯಲ್ಲೇ ಕ್ರಮಕ್ರಮೇಣ ಆದಾಯಕ್ಕೆ ದಾರಿ ಮಾಡಿಕೊಂಡರು. ಆದರೆ, ಇವರ ಖಚಿತವಾದ ಅಪ್ರಿಯವಾಕ್ಕು ಗಿರಾಕಿಗಳನ್ನು ಬರುಬರುತ್ತ ದೂರಕ್ಕೋಡಿಸುತ್ತಿತ್ತು.

ಗುಮಾಸ್ತೆ ಗುಂಡಪ್ಪನಿಗೆ ಜಗಲಿ ಜೋಯಿಸರ ಭವಿಷ್ಯದಲ್ಲಿ ದೃಢವಿಶ್ವಾಸ ಹುಟ್ಟಲು ಅವರು ತನ್ನ ವಿಷಯದಲ್ಲಿ ನುಡಿದಿದ್ದ ಭವಿಷ್ಯ ನಿಜವಾಗಿದ್ದುದೇ ಮುಖ್ಯಕಾರಣ. ಗುಂಡಪ್ಪ ಮೊದಮೊದಲು ಜೋಯಿಸರ ಜ್ಯೋತಿಷ್ಯಜ್ಞಾನದಲ್ಲಿ ತೀವ್ರ ಸಂದೇಹವುಳ್ಳವನಾಗಿಯೇ ಇದ್ದನು. ಹೊತ್ತುಗಳೆಯುವುದಕ್ಕೆ ಜಗಲಿ ಜೋಯಿಸರ ಸಹವಾಸ ಗುಂಡಪ್ಪನಿಗೆ ಉತ್ತಮ ಸಾಧನಗಳಲ್ಲಿ ಒಂದಾಗಿತ್ತು. ಇತರರಿಗೆ ಹೇಳುತ್ತಿದ್ದ ಭವಿಷ್ಯಗಳನ್ನು ಕೇಳುತ್ತ ಎಷ್ಟು ಹೊತ್ತು ಸುಮ್ಮನೆ

ಕುಳಿತಿರುವುದು ? ಆದ್ದರಿಂದ ಜೋಯಿಸರಿಗೆ ಗಿರಾಕಿಗಳಿಲ್ಲದ ವೇಳೆಯಲ್ಲಿ ಗುಂಡಪ್ಪ ಕುಚೋದ್ಯದ ಪ್ರಶ್ನೆಗಳನ್ನು ಹಾಕಿ, ಜ್ಯೋತಿಷ್ಯದಲ್ಲಿ ತನಗೆ ನಂಬಿಕೆಯೇ ಇಲ್ಲವೆನ್ನುತ್ತಿದ್ದ.

"ನೀವು ಹೇಳಿದ ಭವಿಷ್ಯವೆಲ್ಲ ನಿಜವಾಗಿದೆಯೇ, ಮಹಾದೇವಶಾಸ್ತ್ರಿಗಳೇ ?" ಎಂದು ಒಂದು ಸಲ ಗುಂಡಪ್ಪ ಕೇಳಿದನಂತೆ.

"ಜಾತಕದಿಂದ ನನಗೆ ತಿಳಿಯಬಂದದ್ದನ್ನು ನಾನು ಹೇಳುತ್ತೇನೆ. ಎಷ್ಟೋ ಜನ ನಾನು ಹೇಳಿದ್ದು ನಿಜವಾಗಿದೆ ಎಂದು ಬಂದು ಒಪ್ಪಿಕೊಂಡಿದ್ದಾರೆ. ಅರಮನೆ ಶಾಮರಾಯರ ಖಾಯಿಲೆ ಗುಣವಾಗುತ್ತದೆಯೆ ಇಲ್ಲವೆ ಎಂದು ಅವರ ಜಾತಕ ತೋರಿಸಿ ಅವರ ಹೆಂಡತಿ ಕೇಳಿದಾಗ, ನಾನು ಏನು ಹೇಳಿದ್ದೆ, ನೀನೇ ಇದ್ದೆಯಲ್ಲಪ್ಪ ಎದುರಿಗೆ ?" ಎಂದು ಜೋಯಿಸರು ಗುಂಡಪ್ಪನ ಜ್ಞಾಪಕಶಕ್ತಿಯನ್ನು ಕೆಣಕಿದರು.

"ನನಗೆ ಸರಿಯಾಗಿ ಜ್ಞಾಪಕ ಇಲ್ಲ. ಶಾಮರಾಯರು ಸತ್ತೇ ಎಷ್ಟೋ ಕಾಲವಾಯಿತು. ಇಷ್ಟಕ್ಕೂ, ನನಗೆ ಜ್ಞಾಪಕ ಇರುವ ಮಟ್ಟಿಗೆ, ನೀವು ಹೇಳಿದ್ದಾದರೂ ಇಷ್ಟೇ ತಾನೆ, ಅವರ ಹೆಂಡತಿಗೆ : 'ಈ ವರ್ಷ ಕಳೆಯುವವರೆಗೂ ಅನುಮಾನವೇ, ಆಮೇಲೆ ಭಯವಿಲ್ಲ.' ಇಷ್ಟು ಹೇಳುವುದಕ್ಕೆ ಅವರ ಜಾತಕ ಯಾಕೆ ನೋಡಬೇಕಾಗಿತ್ತು ? ನಾಟಕದ ಕಂಪೆನಿ ಸೇರಿಕೊಂಡು ಊರೂರು ಅಲೆಯೋದು, ಮೇಲೆ ರಾಜಠೀವಿ ಒಳಗೆ ಭೋಜನಕ್ಕೇ ರಹ ಇಲ್ಲ, ಮನೆ ಕಟ್ಟಿದ ಸಾಲ ಮಗಳ ಮದುವೆ ಸಾಲ, ಇಷ್ಟರ ಜೊತೆಗೆ ಹಟಾತ್ತನೆ ಬಂದ ಖಾಯಿಲೆ–ಇವುಗಳ ಹೊಡೆತಕ್ಕೆ ಸಿಕ್ಕಿದ ಆ ಬಡಪ್ರಾಣಿ ಇನ್ನು ಎರಡು ತಿಂಗಳು ಬದುಕಿದರೆ ಹೆಚ್ಚು ಅಂತ ನಮ್ಮ ವೆಂಕಟರಮಣಯ್ಯನಿಗೆ ನಾನು ಹೇಳುತ್ತಲೇ ಇದ್ದೆ. ನಾನು ಹೇಳಿದ ಹಾಗೆಯೇ ಆತ ಎರಡು ತಿಂಗಳಿಗೇ ಸತ್ತ. ಇದಕ್ಕೆ ಏನು ಹೇಳುತ್ತೀರಿ ?"

ಗುಂಡಪ್ಪನ ಈ ಸವಾಲಿನಿಂದ ಮಹಾದೇವಶಾಸ್ತ್ರಿಗಳಿಗೆ ಅಸಮಾಧಾನವೇ ಆಯಿತಂತೆ. ಅವರು ತುಸ ಹೊತ್ತು ಸುಮ್ಮನಿದ್ದು, ಕೋಪ ಶಮನಾರ್ಥವಾಗಿ ಗುಂಡಪ್ಪನೇ ಮಾಡಿಕೊಟ್ಟ 'ತಾಯೂರು ಉಂಡೆ ನಶ್ಯ'ದ ಒಂದು ಚಿಟಿಕೆಯನ್ನು ಮೂಗಿಗೆ ಏರಿಸಿ, ಸಮಾಧಾನಗೊಂಡು, ತಮ್ಮ ಕೈಬರಹದ ಕಾಗದಪತ್ರಗಳ ಕಡತದಿಂದ ಹೊಲಿದ 'ಬಾದಾಮಿ ಕಾಗದ'ದ ಹಾಳೆಗಳ ಒಂದು ಚಿಕ್ಕ ಪುಸ್ತಕವನ್ನು ಗುಂಡಪ್ಪನ ಮುಂದೆ 'ನೋಡು' ಎಂದು ಇಟ್ಟರು. ಗುಂಡಪ್ಪ ತುಸ ಹೊತ್ತು ಅದನ್ನು ಪರಿಶೀಲಿಸಿದ.

"ನಿಮ್ಮ, ನಿಮ್ಮ ಮಗಳ ಜಾತಕಗಳ ಫಲ ?" ಎಂದ ಗುಂಡಪ್ಪ.

"ಹೌದು."

"ಅದು ಯಾಕೆ, ಗೌರಮ್ಮನ ಜಾತಕ ಫಲವನ್ನು ಅವಳ ೨೦ನೇ ವರ್ಷಕ್ಕೆ ನಿಲ್ಲಿಸಿಬಿಟ್ಟಿದ್ದೀರಿ ?"

"ಅವಳ ೧೯ನೇ ವರ್ಷದಲ್ಲಿ ಅವಳಿಗೆ ವೈಧವ್ಯಪ್ರಾಪ್ತಿ. ಅವಳ ಬದುಕಿನ ಸೌಭಾಗ್ಯ ಅಲ್ಲಿಗೆ ನಿಂತುಹೋಯಿತು. ಇನ್ನು ಮುಂದಕ್ಕೆ ಬರೆದರೇನು ಬಿಟ್ಟರೇನು ?"

'ಮಗಳ ಜಾತಕಫಲ ಈಚೆಗೆ ಬರೆದದ್ದೋ, ಇಲ್ಲ ಅದನ್ನ ಹಿಂದೆಯೆ ಬರೆದಿದ್ದಿರೋ ?' ಎಂಬ ಕುಚೋದ್ಯದ ಪ್ರಶ್ನೆ ಗುಂಡಪ್ಪನ ನಾಲಗೆಯ ತುದಿಗೆಬಂದಿತ್ತಂತೆ. ಆದರೆ, ಅವರ ಕಂಠ ಗದ್ಗದಿತವಾಗಿ, ಕಣ್ಣು ತೇವವಾದದ್ದು ಇವನ ಗಮನಕ್ಕೆ ಬಂದು, ಪ್ರಶ್ನೆಯನ್ನು ಉಗುಳಿನೊಂದಿಗೆ ನುಂಗಿಕೊಂಡನಂತೆ.

ಇನ್ನೊಮ್ಮೆ ಗುಂಡಪ್ಪ ಜಗಲಿ ಜೋಯಿಸರಿಗೆ ಪ್ರಶ್ನೆ ಹಾಕಿದಾಗ ನಾನೇ ಎದುರಿಗೆ ಇದ್ದೆ. ಗುಂಡಪ್ಪ ಕೇಳಿದ :

"ಜೋಯಿಸರೆ, ನಾನು ಎಷ್ಟು ಬಾರಿ ಪೀಡಿಸಿದರೂ ನೀವು ನನ್ನ ಒಂದು ಪ್ರಶ್ನೆಗೆ ಉತ್ತರ ಹೇಳಿಯೇ ಇಲ್ಲವಲ್ಲ ?"

"ನಿನ್ನದು ಯಾವಾಗಲೂ ಒಂದು ಪ್ರಶ್ನೆಯಲ್ಲ, ಒಂದೇ ಪ್ರಶ್ನೆ–ಅದೇ ತಾನೆ ?" ಎಂದು ಜೋಯಿಸರು ಮುಗುಳುನಗೆ ನಗುತ್ತ ಕೇಳಿದರು.

"ಹೌದು, ಅದೇಯೆ—ನನಗೆ ಯಾವಾಗ ಮದುವೆ ಅಂತ ?"

"ನಿನ್ನ ಜಾತಕ ಅಂತೂ ಇಲ್ಲವಲ್ಲ. ಎಲ್ಲಿ, ನಿನ್ನ ಕೈಕೊಡು, ನೋಡೋಣ ?"

ಗುಂಡಪ್ಪ ಬಲಗೈ ನೀಡಿದ.

"ಹಸ್ತಸಾಮುದ್ರಿಕವೂ ಅಲ್ಪಸ್ವಲ್ಪ ಗೊತ್ತು ಅಂತ ಇಟ್ಟುಕೋ....ನಿಜ ಹೇಳಿದರೆ ಕೋಪಿಸಿಕೊಳ್ಳುವುದಿಲ್ಲ ತಾನೆ ?" ಎಂದು ಜೋಯಿಸರು ಗುಂಡಪ್ಪನ ಮುಖ ನೋಡಿದರು.

"ನಿಜವಾಗಿಯೂ ನಿಜ ಹೇಳಿದರೆ, ಕೋಪ ಯಾಕೆ ?"

"ಹಾಗಿದ್ದಮೇಲೆ ಸರಿ : ನಿನ್ನ ಕೈ ನಿನ್ನ ಜೀವನದ ಕನ್ನಡಿ. ಈ ಪ್ರಪಂಚಕ್ಕೆ ನೀನು ಗುಂಡುರುಳಿ ಬಂದ ಹಾಗೆ ಉರುಳಿ ಬಂದೆ. ನಿನ್ನ ಹಿಂದೆ ಬಹುಶಃ ಅನೇಕ ಮಕ್ಕಳು ನಿಮ್ಮ ತಾಯಿತಂದೆಗೆ ಆಗಿ ಹೋಗಿರಬೇಕು. ನೀನು ಹುಟ್ಟಿ ನಿಮ್ಮ ತಾಯಿತಂದೆಯನ್ನು ತಿಂದುಕೊಂಡೆ. ಪರಾಶ್ರಯ ನಿನ್ನ ಆಜೀವ

ಸೌಭಾಗ್ಯ. ಇನ್ನು ಮದುವೆ–ನನಗಿಂತ ಬಹು ಮುಂಚೆ ನಿನಗೆ ಮದುವೆ ಯಾಗುತ್ತೆ...."

"ಏನು ಜೋಯಿಸರೆ ! ನಿಮಗೂ ಎರಡನೆಯ ಲಗ್ನವೇ, ಈಗ !"

"ನಾನು ಹೇಳಿದ್ದು ನಿನಗೆ ಅರ್ಥವಾಗಲಿಲ್ಲವೆ ? ನನಗೂ ನಿನಗೂ ಇನ್ನು ಮದುವೆ ಎಂದರೆ—ಯಮಧರ್ಮರಾಯನೊಂದಿಗೆ !"

ಈ ಭವಿಷ್ಯದ ವಚನದಿಂದ ಗುಂಡಪ್ಪ ಗಾಬರಿಯೇನೂ ಆಗಲಿಲ್ಲ. ಏಕೆಂದರೆ, ಅವನಿಗೆ ಸಾವಿನ ಭೀತಿ ಇರಲಿಲ್ಲ. ಅವನೇ ಹೇಳಿಕೊಳ್ಳುತ್ತಿದ್ದ ಹಾಗೆ, ಅವನಿಗೆ 'ಅಚಾಡಿ ಪಿಚಾಡಿ' ಒಂದೂ ಇರಲಿಲ್ಲ. ಅಲ್ಲದೆ, ಅವನಿಗೆ ಜೋಯಿಸರ ಭವಿಷ್ಯದಲ್ಲಿ ಇನ್ನೂ ನಂಬಿಕೆ ಮೊಳೆಯಲಿಲ್ಲ. ತನ್ನ ವಿಚಾರವಾಗಿ ನಮ್ಮ ತಂದೆ ಯಿಂದ ಅಥವಾ ನಮ್ಮ ತಾಯಿಯ ಮೂಲಕ ಸಂಗತಿಗಳು ಜೋಯಿಸರಿಗೆ ತಿಳಿದಿರ ಬಹುದೆಂದು ಅವನ ಶಂಕೆ. ಆದರೆ ನಮ್ಮ ತಾಯಿತಂದೆಯಿಂದ ಅವರಿಗೆ ಅವನ ವಿಚಾರ ಯಾವ ವಿವರಗಳೂ ಹೋಗಿರಲಿಲ್ಲವೆಂದು ದೃಢಪಟ್ಟಮೇಲೆ ಜೋಯಿಸರ ಭವಿಷ್ಯದಲ್ಲಿ ತುಸ ತುಸ ವಿಶ್ವಾಸ ಇಣಿಕತೊಡಗಿತ್ತು. 'ತನ್ನ ವಿಚಾರ ಬಲ್ಲ ಇನ್ನು ಯಾರಾದರೂ ಹೇಳಿರಬಹುದೇ ?' ಎಂಬ ಸಂದೇಹ ಇನ್ನೂ ಬಾಧಿಸು ತ್ತಿತ್ತು.

ಒಂದು ದಿನ ಗುಂಡಪ್ಪ ಜೋಯಿಸರ ಬಳಿ ಹೋಗಿ, "ನೀವು ಪ್ರಶ್ನಫಲ ಹೇಳುತ್ತೀರಾ ?" ಎಂದು ಕೇಳಿದನಂತೆ. ಅದಕ್ಕವರು "ಇಲ್ಲ" ಎಂದರಂತೆ.

"ಅದು ಶಾಸ್ತ್ರವಲ್ಲವೆ ?"—ಗುಂಡಪ್ಪ ಕೇಳಿದ.

"ಅಲ್ಲ ಎನ್ನುವುದಿಲ್ಲ."

"ಹಾಗಾದರೆ ಯಾಕೆ ಹೇಳುವುದಿಲ್ಲ ? ಆಚೆ ಬೀದಿಯ ಶಿವರಾಮಶಾಸ್ತ್ರಿ ಗಳು ಹೇಳುತ್ತಾರಲ್ಲ ? ವೀಳೆಯದೆಲೆ ಮಾರುವ ಹೊಲತಿಯರೆಲ್ಲ ಅವರ ಬಳಿ ಮುತ್ತಿರುತ್ತಾರೆ, ಪ್ರಶ್ನೆ ಕೇಳುವುದಕ್ಕೆ ?"

"ನೋಡು, ಗುಂಡಪ್ಪ, ಇನ್ನೊಬ್ಬರ ವಿಚಾರದಲ್ಲಿ ನಾವು ತಲೆಹಾಕುವುದು ಸರಿಯಲ್ಲ. ಅವರು ಮೂರು ಕಾಸು ಸಂಪಾದನೆ ಮಾಡುತ್ತಾರೆ ಅಂತ ನಾನು ಅಸೂಯೆಪಡಲಿ ?"

"ಅವರ ಸಂಪಾದನೆಗೆ ಕಲ್ಲುಬೀಳುತ್ತೆ ಅಂತ ನೀವು ಆ ಕೆಲಸ ಮಾಡು ತ್ತಿಲ್ಲವೋ ?"

"ಅಸೂಯೆಯೂ ಇಲ್ಲ ಅನುತಾಪವೂ ಇಲ್ಲ. ಪಾಚಿಕಟ್ಟಿದ ಕಲ್ಲಮೇಲೆ ಪಾದ ಇಡಬಾರದು, ಅಷ್ಟೆ."

"ಅಂದರೆ ? ನನಗೆ ಅರ್ಥವಾಗಲಿಲ್ಲವಲ್ಲ ?"

"ಅರ್ಥವಾಗದೆ ಇದ್ದರೆ ಬೇಡ. ನನಗೆ ಹೇಳಲು ಇಷ್ಟವಿಲ್ಲ. ಸರಿಯೆ ?"

"ಹೋಗಲಿ, ನನಗೆ ಹೇಳುವುದಕ್ಕೆ ಅಡ್ಡಿಯೇನು ?"

"ಒಂದು ನಿಮಿಷವೂ ವ್ಯತ್ಯಾಸವಾಗದಂತೆ ಸರಿಯಾಗಿ ಪ್ರಶ್ನೆಯ ಕಾಲ ತಿಳಿಸುವುದಕ್ಕೆ ನಿನಗೆ ಸಾಧ್ಯವೇನಯ್ಯ ?"

ಗುಂಡಪ್ಪ ತುಸ ಹೊತ್ತು ಆಲೋಚನೆಯಲ್ಲಿ ಮುಳುಗಿದ. ಬಳಿಕ ಎಂದ: "ಹೌದು, ನೀವು ಹೇಳುವುದು ದಿಟ. ರಾತ್ರಿ ಹತ್ತು ಗಂಟೆ ಆಗುವ ವರೆಗೂ ಅರಸಿನವರ ಮನೆಯ ಜಾಗಟೆಯ ಗಂಟೆಯೂ ಕೇಳುವುದಿಲ್ಲ. ಈ ಅಗ್ರಹಾರದ ಬೀದಿಯಲ್ಲಿ ಇಬ್ಬರ ಮನೆಯಲ್ಲಿ ಗಡಿಯಾರ ಇದೆ. ಒಂದು ಮುಂದು, ಇನ್ನೊಂದು ಹಿಂದು. ಆದರೆ, ಈ ಬೀದಿಯಲ್ಲೇ ಪ್ರತಿನಿತ್ಯ ಈ ಹೊತ್ತಿಗೆ ಬಸವರಾಜೇ ಅರಸಿನವರು ಸಂಚಾರದಿಂದ ಹಿಂದಿರುಗುತ್ತಾರೆ ನೋಡಿ. ಅವರ ಹತ್ತಿರ ಚಿನ್ನದ ಗಡಿಯಾರ ಇದೆ. ಅಂದಮೇಲೆ, ಸರಿಯಾದ ಗಂಟೆ ತೋರಿಸಬೇಕು. ಈಹೊತ್ತು ಅವರನ್ನೇ ಕೇಳಿಬಿಡುತ್ತೇನೆ."

'ಒಳ್ಳೇ ಶನಿ ವ ಕ್ರಿ ಸಿ ದ ಹಾಗಾಯಿತಲ್ಲ', ಎಂದುಕೊಂಡಿರಬೇಕು, ಸಾತ್ತ್ವಿಕರಾದ ಜಗಲಿ ಜೋಯಿಸರು ಕೂಡ.

ಗುಂಡಪ್ಪ ನಿರೀಕ್ಷಿಸಿದಂತೆ ಆ ಅರಸಿನವರು ಸ್ವಲ್ಪ ಹೊತ್ತಿನಲ್ಲಿಯೇ ಆ ಮಾರ್ಗವಾಗಿ ಬಂದರು. ಗುಂಡಪ್ಪ ಧೈರ್ಯಮಾಡಿ, ಪ್ರಣಾಮ ಸಲ್ಲಿಸಿ, 'ಬುದ್ಧಿಯೋರೆ, ಗಂಟೆ ಎಷ್ಟು ಅಪ್ಪಣೆಯಾಗಬೇಕು' ಎಂದು ಕೇಳಿಯೇಬಿಟ್ಟ. "ಸಂಜೆಯಾಯಿತು, ಕಣ್ಣು ಮಂಜು, ನೀವೇ ನೋಡಿಕೊಳ್ಳಿ" ಎಂದು ಅರಸಿನವರು ಗಡಿಯಾರವನ್ನು ಒಳಜೇಬಿನಿಂದ ಹೊರತೆಗೆದು ಗುಂಡಪ್ಪನ ಮುಂದೆ ಹಿಡಿದರು. ಗುಂಡಪ್ಪ ಬಹು ಸೂಕ್ಷ್ಮವಾಗಿ ಪರಿಶೀಲಿಸಿ, ಸರಿಯಾದ ಗಂಟೆ ಯರಿತು, ಜೋಯಿಸರಿಗೆ ಬಂದು ತಿಳಿಸಿದ.

"ಮನಸ್ಸಿನಲ್ಲಿ ಕೇಳಬೇಕಾದ ಪ್ರಶ್ನೆಯನ್ನು ಕುರಿತಿದ್ದೀ ತಾನೇ ?" ಎಂದು ಪ್ರಶ್ನಿಸಿದರು.

"ನಿನ್ನೆ ತಲೆಗೆ ಹತ್ತಿದ ಪ್ರಶ್ನೆ ಇನ್ನೂ ಮೆತ್ತಿಕೊಂಡೇ ಇದೆ."

ಜೋಯಿಸರು ಪ್ರಶ್ನಕುಂಡಲಿ ಬರೆದರು, ಗುಣಿಸಿದರು, ಗಂಭೀರವಾಣಿ ಯಲ್ಲಿ ನುಡಿದರು:

"ದ್ರವ್ಯ ನಷ್ಟಕ್ಕಾಗಿ ಪೇಚಾಡುತ್ತಿದ್ದೀಯೆ. ಆದರೆ ಅದು ನಿಜವಾಗಿ ನಷ್ಟ ವಾಗಿಲ್ಲ. ಕೈಬಿಟ್ಟು ಹೋದ ಲಕ್ಷ್ಮಿ ತಾನಾಗಿ ನಿನ್ನ ಬಳಿಗೆ ಬರುತ್ತಾಳೆ ಗುಂಡಪ್ಪ."

ಗುಂಡಪ್ಪ 'ಹೌದು' ಎಂದು ಆಗ ಒಪ್ಪಿಕೊಂಡು, ಎರಡು ದಿನ ಬಿಟ್ಟು

ಜೋಯಿಸರ ಸಾಮರ್ಥ್ಯವನ್ನು ಮೆಚ್ಚಿಕೊಂಡ, ಒಪ್ಪಿಕೊಂಡ.

ಸರ್ಕಾರದವರು ಅದೇ ತಾನೆ ಹೊಸದಾಗಿ ಕರೆನ್ಸಿ ನೋಟುಗಳನ್ನು ಜಾರಿಗೆ ತಂದಿದ್ದರು. ಕಾಗದದ ಹಣವನ್ನು ಎಲ್ಲರಂತೆ, ಎಲ್ಲರಿಗಿಂತ ಹೆಚ್ಚಾಗಿ, ಗುಂಡಪ್ಪ ಸಂಶಯ ದೃಷ್ಟಿಯಿಂದ ನೋಡುತ್ತಿದ್ದ. ಆ ಸಲ ತನ್ನ ಸಂಬಳ ತೆಗೆದುಕೊಳ್ಳುವಾಗ ಕುತೂಹಲಾಸಕ್ತಿಯಿಂದ ಒಂದು ಐದು ರೂಪಾಯಿನ ನೋಟನ್ನು ಪಡೆದು ತಂದು, ನಮ್ಮ ಮನೆಯಲ್ಲಿ ಅದನ್ನು ಎಲ್ಲರಿಗೂ ತೋರಿಸಿದ್ದ. ಯಾರಿಂದಲೋ 'ವಿಕಟವಿನೋದಿನಿ'ಯನ್ನು ಓದಲು ಎರವಲು ತಂದಿದ್ದವನು ಅದನ್ನು ಹಿಂದಿರುಗಿಸುವಾಗ ಅದರಲ್ಲಿಟ್ಟಿದ್ದ ನೋಟನ್ನು ತೆಗೆದುಕೊಳ್ಳುವುದನ್ನು ಮರೆತಿದ್ದ. 'ವಿಕಟವಿನೋದಿನಿ'ಯ ಆ ಪ್ರಾಮಾಣಿಕ ಸ್ನೇಹಿತರು ನೋಟನ್ನು ಗುಂಡಪ್ಪನಿಗೆ ಹಿಂದಿರುಗಿಸಿದಾಗ ಅವನಿಗೆ ಆದ ಸಂತೋಷ ಅಷ್ಟಿಷ್ಟಲ್ಲ.

ಅಂದಿನಿಂದ, ಜಗಲಿ ಜೋಯಿಸರ ಜ್ಯೋತಿಷ್ಯದಲ್ಲಿ ಗುಂಡಪ್ಪನ ಅಲುಗಾಡುತ್ತಿದ್ದ ನಂಬಿಕೆ ಬಲಪಟ್ಟಿತು; ಅವನು ಅವರ ಪ್ರಚಾರಕನಾದ. ಆದರೆ, ಆ ಪ್ರಚಾರದ ವ್ಯಾಪ್ತಿ ನಮ್ಮ ಬೀದಿಗೆ ಮಾತ್ರ ಮಿತಿಗೊಂಡಿತ್ತು. ಜಗಲಿ ಜೋಯಿಸರ ದುರದೃಷ್ಟ.

ಇದಾದ ತರುವಾಯ ಒಂದು ದಿನ ಗುಂಡಪ್ಪ ಜೋಯಿಸರನ್ನು ಪ್ರಶ್ನಿಸಿದ :

"ಮನಸ್ಸಿಗೆ ಹಚ್ಚಿಸಿಕೊಳ್ಳದೆ ಹೋದರೆ ಒಂದು ಪ್ರಶ್ನೆ ಕೇಳಬೇಕಲ್ಲ ?"

"ಮನಸ್ಸಿಗೆ ಹಚ್ಚಿಸಿಕೊಳ್ಳುವುದು ನನ್ನ ಜಾತಕದಲ್ಲಿ ಇಲ್ಲ, ಕೇಳು."

"ನಿಮ್ಮ ಮಗಳ ವೈಧವ್ಯದ ಸಂಗತಿ ಅವಳ ಮದುವೆಗೆ ಮುಂಚೆ ನಿಮಗೆ ಗೊತ್ತಿತ್ತೆ ?"

"ಗೊತ್ತಿತ್ತು."

"ತಿಳಿದೂ ತಿಳಿದೂ ಯಾಕೆ ಮದುವೆ ಮಾಡಿದಿರಿ ?"

"ಅವಳ ಹಣೆಯಲ್ಲಿ ಬರೆದಿರುವುದನ್ನು ತಪ್ಪಿಸುವುದಕ್ಕೆ ನನ್ನಿಂದ ಸಾಧ್ಯವೆ? ನನ್ನ ಬೀಗರೂ ಅಲ್ಪ ಸ್ವಲ್ಪ ಜ್ಯೋತಿಷ್ಯ ಬಲ್ಲವರು. ಮಗನಿಗೆ ಅಲ್ಪಾಯುಸ್ಸು, ತಿಳಿದರೆ ಯಾರು ಹೆಣ್ಣು ಕೊಡುತ್ತಾರೆ ಎಂತ ಕುದ್ದುಕೊಳ್ಳುತ್ತಿದ್ದರಂತೆ. ನಾನು ಅವರಲ್ಲಿ ಮದುವೆಯ ಪ್ರಸ್ತಾಪಮಾಡಿದಾಗ, ಅವರು ಇದ್ದುದನ್ನು ಇದ್ದ ಹಾಗೆಯೇ ಹೇಳಿದರು. ನಾನೂ ಇದ್ದುದನ್ನು ಇದ್ದಹಾಗೆಯೇ ಹೇಳಿದೆ. ಇಬ್ಬರೂ ಒಪ್ಪಿ ಸಂಬಂಧ ಬೆಳೆಸಿದೆವು. ಬ್ರಹ್ಮ ಕೊಟ್ಟಿದ್ದ ತೀರ್ಪನ್ನು ನಾವು ಜಾರಿ ಮಾಡಿದೆವು. ಇನ್ನು ಏನಾದರೂ ಕೇಳುವುದಿದೆಯೋ ?"

"ಏನೂ ಇಲ್ಲ. ನನ್ನ ಅಜ್ಞಾನವನ್ನು ಮನ್ನಿಸಬೇಕು. ತಾನೇ ಬ್ರಹ್ಮ ಸ್ವರೂಪರು" ಎಂದು ಗುಂಡಪ್ಪ ಜೋಯಿಸರಿಗೆ ದೀರ್ಘದಂಡ ನಮಸ್ಕಾರ ಮಾಡಿದ.

ಅಂದಿನಿಂದ, ಪ್ರತಿದಿನವೂ ಐದು ನಿಮಿಷವಾದರೂ ಮಹಾದೇವಶಾಸ್ತ್ರಿ ಗಳೊಂದಿಗೆ ಕಾಲ ಕಳೆದಲ್ಲದೆ ಗುಂಡಪ್ಪನಿಗೆ ತೃಪ್ತಿಯಿರುತ್ತಿರಲಿಲ್ಲ, ಮನಸ್ಸಮಾ ಧಾನವಿರುತ್ತಿರಲಿಲ್ಲ.

ಜಗಲಿ ಜೋಯಿಸರು ನುಡಿದಂತೆಯೇ ಗುಂಡಪ್ಪ ಅವರ ಕಣ್ಣೆದುರೇ ಕಣ್ಣು ಮುಚ್ಚಿದ. ಅವನ ಅಪರಕರ್ಮಗಳನ್ನು ನಮ್ಮ ತಂದೆಯೇ ನೆರವೇರಿಸ ಬೇಕಾಗಿ ಬಂದಿತು. ನಮ್ಮ ತಂದೆಗೆ ಆ ಸ್ನೇಹದ ಕರ್ತವ್ಯದಲ್ಲಿ ಮನಃಪೂರ್ವಕವಾಗಿ, ಪೂರ್ಣವಾಗಿ ನೆರವಾದ ಒಬ್ಬರೇ ನೆರೆಯವರೆಂದರೆ, ನಮ್ಮ ಜಗಲಿ ಜೋಯಿಸರು.

ಜಗಲಿ ಜೋಯಿಸರ ಸ್ವಭಾವವೇ ಅಂತಹದಾಗಿತ್ತು. ಬಾಳ ಬೇಗೆಗೆ ಸಿಲುಕಿ ಪುಟಗೊಂಡ ಹೃದಯ, ಆಗ್ಗೆ ಸುಮಾರು ೬೦ ಮಾಗಿಗಳಲ್ಲಿ ಮಾಗಿ ಹಣ್ಣಾದ ಹೃದಯ. ತಾವೇ ಬಡವರಾದರೂ ಬಡವರೆಂದರೆ ಅವರ ಹೃದಯ ಹಾತೊರೆಯುತ್ತಿತ್ತು. ಇಷ್ಟಾದರೂ, ನಮ್ಮ ಬೀದಿಯ ಬಹು ಜನಕ್ಕೆ ಅವರ ವಿಚಾರದಲ್ಲಿ ಅಸಮಾಧಾನ.

"ಅಲ್ಲ, ಗೌರಿ ಚಿಕ್ಕಪುಟ್ಟ ಹುಡುಗಿಯೇ ? ಏಳೆಂಟು ವರ್ಷದ ಮಗ ಬೇರೆ ಇದಾನೆ, ಮುತ್ತಿನ ಮಣಿಯ ಹಾಗೆ. ಇದೆಲ್ಲಿಯ ಹಣೆಯ ಬರಹ, ಈ ಬಡಬ್ರಾಹ್ಮಣನಿಗೆ, ಮಗಳಿಗೆ 'ಮಡಿ' ಹಿಡಿಸದೆ ಅವಳಿಗೂ ತಾನೇ ಬೇಯಿಸಿ ಹಾಕುವುದು ?"—ಎಂದು ಆ ಜನದ ಆಕ್ಷೇಪ.

"ಎಷ್ಟೆಂದರೂ ಅವರು ಜೋಯಿಸರಲ್ಲವೆ, ಆ ಕೆಲಸಕ್ಕೆ ಸರಿಯಾದ ಲಗ್ನ ಸಿಕ್ಕಿಲ್ಲವೇನೋ" ಎಂಬ ನಾಟಕದ ಸುಬ್ಬಣ್ಣನ ನಕಲಿ ಮಾತನ್ನು ಕೇಳಿ ನಮ್ಮ ತಂದೆ ಆತನನ್ನು ಬೈದುದೂ ಉಂಟು.

ಗುಂಡಪ್ಪ ಸಾಯುವ ಮುನ್ನ ಜಗಲಿ ಜೋಯಿಸರಿಗೆ ಅದು ಹೇಗೋ ಒಬ್ಬ ಶ್ರೀಮಂತ ಅರಸಿನವರ ಪರಿಚಯ ಮಾಡಿಸಿಕೊಟ್ಟ. ಅವರಿಂದಾಗಿ ಅನೇಕ ಅರಸುಗಳ ಗೃಹಗಳಲ್ಲಿ ನಮ್ಮ ಜಗಲಿ ಜೋಯಿಸರಿಗೆ ಗೌರವದ ಪುರಸ್ಕಾರ ದೊರೆಯತೊಡಗಿತು. ಶ್ರೀಮಂತರಾಗದಿದ್ದರೂ ದಟ್ಟ ದಾರಿದ್ರ್ಯದ ದವಡೆ ಯಿಂದ ಹೊರಬಂದರು ಮಹಾದೇವಶಾಸ್ತ್ರಿಗಳು. ಮೊಮ್ಮಗನ ಉಪನಯನ ಮಾಡಿದರು, ತಮ್ಮ ಉಗ್ರಶಾಂತಿಯನ್ನು ಶಾಂತರೀತಿಯಲ್ಲಿ ನೆರವೇರಿಸಿದರು.

"ನೋಡು ವೆಂಕಟರಮಣಯ್ಯ, ಇಷ್ಟೆಲ್ಲ ನಿಮ್ಮ ಗುಂಡಪ್ಪನಿಂದ ಆದ ಉಪಕಾರ. ನನಗೆ ನಿಜವಾಗಿ ಈಗ ಶುಕ್ರದಶೆ ಪ್ರಾರಂಭವಾಗಿದೆ. ಜ್ಯೋತಿಷ್ಯ

ಸುಳ್ಳಾಗೋಣ ಅಂದರೆ ಏನು ?" ಎಂದು ಜೋಯಿಸರು ಒಮ್ಮೆ ನಮ್ಮ ತಂದೆ ಯೊಂದಿಗೆ ಪ್ರಸ್ತಾಪಿಸಿದರು.

"ಹೌದು, ಹೌದು. ಗುಂಡಪ್ಪ ನಿಜವಾಗಿ ಉಪಕಾರಿ. ನನಗಿಂತ ಹೆಚ್ಚಾಗಿ ಇನ್ನು ಯಾರಿಗೆ ತಿಳಿಯೋದು ಆ ವಿಚಾರ ? ಅದು ಸರಿ, ಬೀದಿ ಯವರೆಲ್ಲ...."

"ಗೊತ್ತು ಗೊತ್ತು, ಬಿಡು ವೆಂಕಟರಮಣಯ್ಯ. ನನ್ನ ಮಗಳ ವಿಚಾರ ತಾನೆ ? ಅವಳಿಗೆ ಇಷ್ಟವಿಲ್ಲ ; ನಾನು ಬಲವಂತ ಮಾಡಲಾರೆ. ನನ್ನ ಕೈ ಕಾಲು ಗಟ್ಟಿಯಾಗಿರುವವರೆಗೂ ಬೇಯಿಸಿಕೊಳ್ಳುತ್ತೇನೆ. ಆಮೇಲೆ ನೋಡಿ ಕೊಳ್ಳೋಣ" ಎಂದರು, ಜೋಯಿಸರು.

ಇದೆಲ್ಲ ಹಿಂದಿನ ಕಥೆ. ನಾನು ಉದರಂಭರಣಕ್ಕಾಗಿ ಬೆಂಗಳೂರಿನಲ್ಲಿ ನೆಲಸಬೇಕಾಯಿತು. ಕೆಲವು ವರ್ಷಗಳ ಹಿಂದೆ ಮೈಸೂರಿಗೆ ಹೋದಾಗ ಜಗಲಿ ಜೋಯಿಸರನ್ನು ನೋಡಹೋಗಿದ್ದೆ. ಆಗ ಅವರಿಗೆ ಎಂಬತ್ತು ವರ್ಷ. ಅವರ ಮುಖದಲ್ಲಿ ತೃಪ್ತಿ ಸಂತೋಷಗಳು ಸುಕ್ಕಿನ ಗೆರೆಗಳಲ್ಲಿಯೂ ಖಚಿತವಾಗಿದ್ದವು. ಮನೆಯಲ್ಲಿ ಮೊಮ್ಮಗ, ಅವನ ಹೆಂಡತಿ–ನಲವಿನಿಂದಿದ್ದರು. ತಂದೆಯ ಸೇವೆ ಗಾಗಿ ಗೌರಿ ಮಡಿ ಹಿಡಿದಿದ್ದಳು.

ಜೋಯಿಸರಲ್ಲಿ ನನ್ನ ಭವಿಷ್ಯ ತಿಳಿಯುವ ಕುತೂಹಲ ನನಗೆ. ಹೋಗಿ ಕೇಳಿದೆ.

"ನಾನು ಜಾತಕ ನೋಡುವುದು, ಕೈ ನೋಡುವುದು ಎಲ್ಲ ಬಿಟ್ಟುಬಿಟ್ಟಿ ದೇನೆ, ರಾಮು. ಕಣ್ಣು ಬೇರೆ ಮಂಜು, ಪೊರೆ ಬೆಳೆದಿದೆ. ಒಂದು ಮಾತು ನೋಡು : ನನ್ನ ಅನುಭವದಲ್ಲಿ, ನಾನು ಹೇಳಿದ ಭವಿಷ್ಯ ಎಂದೂ ಸುಳ್ಳಾಗಿಲ್ಲ. ಸರಿಯಾಗಿ ಹೇಳಬಲ್ಲ ಶಾಸ್ತ್ರಜ್ಞಾನ ಇದ್ದರೆ, ಜ್ಯೋತಿಷ್ಯ ಸುಳ್ಳಾಗದು....ಆದರೆ ಭವಿಷ್ಯ ತಿಳಿದು ಏನಾಗಬೇಕು ? ನಡೆಯಬೇಕಾದ್ದು ನಡೆಯಲೇಬೇಕು. ನಾವೇ ಕಟ್ಟಿಕೊಂಡ ಕರ್ಮ ಪಾಶದಿಂದ ವಿಮುಕ್ತರಾಗಲು ಸಾಧ್ಯವಿಲ್ಲ. 'ಅವಶ್ಯಂ ಅನುಭೋಕ್ತವ್ಯಂ ಕೃತಕರ್ಮ ಶುಭಾಶುಭಂ.' ಕರ್ಮಕ್ಷಯಕ್ಕೆ ಒಂದೇ ಮಾರ್ಗ, ಈ ಜನ್ಮದಲ್ಲಿ ಸತ್ಕರ್ಮ ನಿರತರಾಗಬೇಕು. ನಮ್ಮ ಭವಿಷ್ಯ ನಮ್ಮ ಕೈಯಲ್ಲೇ ಇದೆ. ಇನ್ನು ಭವಿಷ್ಯ ತಿಳಿಯುವುದೆಂದರೇನು, ಯಾತಕ್ಕೆ ? ಕೈ ಹುಣ್ಣಿಗೆ ಕನ್ನಡಿಯೇ ? ಬಲ್ಲ ಕಾವ್ಯಕ್ಕೆ ಮಲ್ಲಿನಾಥ ಏಕೆ ? ಈ ಬದುಕು ಸುಂದರ ಕಾವ್ಯ ಕಣಯ್ಯ, ರಾಮು. ಅನುಭವಿಸಿ, ಎಲ್ಲ ರಸಗಳನ್ನೂ ಸವಿಯಬೇಕು. ಸುಖ ಇರಲಿ, ದುಃಖ ಬೇಡ ಎಂದರೆ ಹೇಗೆ ? ಮುಂದೆ ಏನಾಗುತ್ತೆ ಎಂಬ ಕುತೂಹಲ

ಇದ್ದರೆ ತಾನೆ ಕಥೆ ಸೊಗಸು ? ಭವಿಷ್ಯ ತಿಳಿದರೆ ಬದುಕು ನೀರಸ, ರಾಮು. ನನ್ನಿಂದ ಇರಲಿ, ಯಾರಿಂದಲೂ ಭವಿಷ್ಯ ತಿಳಿಯಹೋಗಬೇಡ....”

ಜಗಲಿ ಜೋಯಿಸರ ಉಪದೇಶ ಈಗಲೂ ಕಿವಿಯಲ್ಲಿ ಮೊರೆಯುತ್ತಿದೆ. ಜ್ಯೋತಿಷ್ಯದ ಜಗಲಿಯಿಂದ ಅವರು ವೇದಾಂತದ ಉಪ್ಪರಿಗೆಗೆ ಏರಿದ್ದರು.

ನನ್ನಂಥ ಸಾಮಾನ್ಯರಿಂದ ಅದು ಸಾಧ್ಯವೆ ? ಸಾಧ್ಯವಾಗಬೇಕು.

ಜೀವ ಹಣ್ಣಾಗಿತ್ತು. ಎರಡು ವರ್ಷಗಳ ಹಿಂದೆ ಕಳಚಿಬಿತ್ತು–ಎಂದು ಕೇಳಿದೆನಷ್ಟೆ. ಅವರ ಅಂತ್ಯದರ್ಶನ ಪಡೆಯುವ ಭಾಗ್ಯ ಇಲ್ಲವಾಗಿತ್ತು.

# ಹಾಲಿನ ಹನುಮಕ್ಕ

"ಹಾಲು ಕುಡಿದ ಮಕ್ಕಳೇ ಬದುಕುವುದಿಲ್ಲ, ಇನ್ನು ನೀರು ಕುಡಿದ ಮಕ್ಕಳು ಬದುಕುತ್ತವೆಯೇ ?" ಎಂಬ ಹೇಳಿಕೆ ಅಪ್ಪಟ ಹಾಲು ದೊರಕುತ್ತಿದ್ದ ಕಾಲದಲ್ಲಿ ಹುಟ್ಟಿರಬೇಕು. ಹಾಲಿಗೂ ನೀರಿಗೂ ಇರುವ ಈ (ಬಹುಶಃ) ಅನಾದಿಯಾದ ವೈಷಮ್ಯವನ್ನು ಥೋಗಲಾಡಿಸಿ, 'ವಾಗರ್ಥಾವಿವ ಸಂಪೃಕ್ತೌ.... ಪಾರ್ವತೀಪರಮೇಶ್ವರೌ' ಎಂಬ ಕಾಳಿದಾಸ ಪ್ರೋಕ್ತವಾದ ಅವಿನಾಬಾಂಧವ್ಯ ವನ್ನು ಎರಡಕ್ಕೂ ಕಲ್ಪಿಸಿ, ಈಗ ನಾಡಿನವರಿಗೆಲ್ಲಾ ರಕ್ತಗತವಾಗಿ ನಿತ್ಯಾನು ಭವಕ್ಕೆ ಬರುತ್ತಿರುವ 'ನೀರಕ್ಷೀರ' ನ್ಯಾಯವನ್ನು ಬಳಕೆಗೆ ತಂದ ಗೋಪಿಕಾ ವಂಶಕ್ಕೆ ಸೇರಿದವಳು 'ನಮ್ಮ ಹಾಲಿನ ಹನುಮಕ್ಕ. ಹಾಲು-ನೀರಿನ ಈ ಸಂಬಂಧವನ್ನು 'ಮದುವೆ' ಎಂದು ಕರೆಯುತ್ತಿದ್ದರು ನಮ್ಮ ನಾಟಕದ ಸುಬ್ಬಣ್ಣ ನವರು. "ಏನು ಹನುಮಕ್ಕ, ಹಾಲಿಗೆ ಇವೊತ್ತು ಎರಡನೆಯ ಮದುವೆಯೋ? ಮೂರನೆಯ ಮದುವೆಯೋ ?" ಎಂದು ಸುಬ್ಬಣ್ಣನವರು ಕುಚೋದ್ಯಮಾಡಿದರೆ, "ಕರೆದಹಾಲು ಕರೆದಹಾಗೇ ತಂದಿದೇನಲ್ಲ ಸುಬ್ಬಣ್ಣೋರೇ" ಎಂಬ ಅಮೃತ ವಾಕ್ಕನ್ನೇ ನುಡಿಯುವಳು ಹನುಮಕ್ಕ. ಇದಕ್ಕೆ ಸುಬ್ಬಣ್ಣನವರು, "ಅಯ್ಯೋ ಅಯ್ಯೋ ಅಂಥ ಪಾಪಕಾರ್ಯ ಮಾಡಬಹುದೆ ಹನುಮಕ್ಕ ? ಹಾಲಿಗೆ ಮದುವೆ ಮಾಡಿ ಪುಣ್ಯ ಕಟ್ಟಿಕೋ ಮಹಾತಾಯಿ" ಎಂದು ವ್ಯಂಗ್ಯವಾಗಿ ನುಡಿಯು ವರು. ಒಮ್ಮೆ ಹನುಮಕ್ಕ ನಮ್ಮ ಮನೆಯಲ್ಲಿ ಹಾಲು ಹಾಕುತ್ತಿದ್ದಾಗ, ಸುಬ್ಬಣ್ಣನವರು ನಮ್ಮ ಮನೆಗೆ ಬಂದಿದ್ದರು ; ಹಾಲಿನ ಸಂಬಂಧದ ಮಾತಿನಲ್ಲಿ ಬೆರೆತು, ಮೂರು ನಾಲ್ಕು ಸಲ ಅವಳನ್ನು 'ಮಹಾತಾಯಿ, ಮಹಾತಾಯಿ' ಎಂದು ಕುರಿತರು. ನಮ್ಮ ಗುಮಾಸ್ತೆ ಗುಂಡಪ್ಪ, "ನೀವು ಹೇಳುವುದು ದಿಟ, ಸುಬ್ಬಣ್ಣೋರೆ. ನಮ್ಮ ಬೀದಿಯ ಮಕ್ಕಳ ತಾಯಂದಿರಿಗೆ, ಮಕ್ಕಳಿಗೆ ಹನುಮಕ್ಕನ ಹಾಲೇ ಗತಿ. ನಿಜವಾಗಿ ಅವಳು ಮಹಾತಾಯಿ"-ಎಂದು ಹನುಮಕ್ಕನನ್ನು ಹೊಗಳುವ ರೀತಿ ನುಡಿದರು. "ಅಲ್ಲವೇ ಮತ್ತೆ ! ಹಾಲು ಕಡಲಿನ ಮೇಲೆ ಪವಡಿಸುವ ಶ್ರೀಮನ್ನಾರಾಯಣನ ಮಡದಿಯಾದ ಮಹಾ

ಲಕ್ಷ್ಮಿಯ ಅಪರಾವತಾರವಲ್ಲವೇ ಇವಳು. ಆ ಮಹಿಮೆಯಿಂದ ತಾನೆ, ಮನೆಯಲ್ಲಿ ಹಸು ಕಟ್ಟಿರಲಿ ಕಟ್ಟಿರದೆ ಹೋಗಲಿ, ನಮ್ಮ ಬೀದಿಗೆಲ್ಲ ಹಾಲು ಸರಬರಾಜು ಮಾಡುವ ಶಕ್ತಿ ನಮ್ಮ ಈ ಮಹಾತಾಯಿಗೆ ಇರುವುದು ?" ಎಂದು ಹಾಸ್ಯಮಾಡಿ, ಅಷ್ಟಕ್ಕೆ ಸುಮ್ಮನಾಗದೆ, ('ಹನುಮನ ನೆನೆದರೆ ಹಾರಿ ಪೋಪುದು ಪಾಪ' ಎಂಬ ಪುರಂದರದಾಸರ ಉಕ್ತಿಯನ್ನು ಅನುಕರಿಸಿ)–

"ಹನುಮಕ್ಕ ಬಂದರೆ ಹಾಲು ಹರಿವುದು ಬೀದಿಲಿ
ಅಂಜಿಕೆನ್ನ್ಯಾತಕಯ್ಯಾ ಬೀದಿಯ ಜನಕೆ ।
ಅಂಜಿಕಿನ್ನ್ಯಾತಕಯ್ಯಾ....॥"

ಎಂದು ಒಂದು ಚರಣ ಕಟ್ಟಿ ಹಾಡಿಯೇ ಬಿಟ್ಟರು. ಯಾರು ಏನೆಂದರೂ ಸಾಮಾನ್ಯವಾಗಿ ಕೋಪಗೊಳ್ಳದಿದ್ದ ಹನುಮಕ್ಕ ಕೂಡ ಸುಬ್ಬಣ್ಣನವರ ಹಾಸ್ಯದಿಂದ ಕೆರಳಿಬಿಟ್ಟಳು. "ಮೂರು ವರ್ಷದಿಂದ ಐವತ್ತು ರೂಪಾಯಿ ಬಾಕಿ ಮಡಗಿಕೊಂಡು, ನನ್ನನ್ನ ಹಾಸ್ಯ ಮಾಡೋವಷ್ಟು ನರ ಐತ ಈ ನರಪೇತಲು ಸುಬ್ಬಣ್ಣಂಗೆ !" ಎಂದು ಏಕವಚನ ಪ್ರಯೋಗದ ಮಂತ್ರಪುಷ್ಪವನ್ನು ಸುಬ್ಬಣ್ಣನವರ ಮೇಲೆ ಎಸೆದೇಬಿಟ್ಟಳು. ಸುಬ್ಬಣ್ಣನವರಿಗೂ ರೇಗಿತ್ತು : "ನೆರೆಹೊರೇಲಿ ನನ್ನ ಮಾನ ಕಳೀತೀಯಾ ? ನಿನ್ನ ಮಿಂಡಂದಿರಿಗೆಲ್ಲಾ ನೊರೆಹಾಲು ಕಾಯಿಸಿ ಕೊಡ್ತೀಯಂತೆ ! ನಮ್ಮ ಮನೇಗೆ ನಿತ್ಯವೂ ನೀರು ಹಾಲು ಹುಯ್ದು, ಬಾಕಿ ಕೊಡಬೇಕು ಅಂತ ಬೀದಿಯೋರಿಗೆಲ್ಲಾ ಕೇಳೋಹಾಗೆ ಬಡಕೋತೀಯಾ ? ನಾನು ಕೊಡಬೇಕಾದ್ದು, ಹಾಲಿನ ಬಾಕಿ ಅಲ್ಲ, ನೀರಿನ ಬಾಕಿ, ತಿಳಿಯಿತೇ ಹನುಮಕ್ಕ ? ಅಂದರೆ, ನಾನು ಸತ್ತರೂ ನನ್ನ ಮಗ ಕೂಡ ಕೊಡೋದಿಲ್ಲ. ತಿಳಿಯಿತೆ ?"
"ಹಾಲು ಕುಡಿದ ಮಕ್ಕಳೇ ಬದುಕೋದಿಲ್ಲ, ನೀರು ಕುಡಿದ ಮಕ್ಕಳು ಬದುಕುತ್ತವೆಯೋ ಅನ್ನೋ ಗಾದೆ ಕೇಳಿಲ್ಲವೆ ಸುಬ್ಬಣ್ಣೋರೆ ? ಬೀದಿಯ ಮಕ್ಕಳೆಲ್ಲ ಬದುಕಲಿ ಅಂತಲೇ ಹನುಮಕ್ಕ ಹಾಲಿಗೆ ಸ್ವಲ್ಪ ನೀರು ಬೆರಸೋದು. ನೀರು ಬೆರಸದೆ ಹೋದರೆ ಹಸುಗಳೂ ಏಳಿಗೆಯಾಗುವುದಿಲ್ಲವಂತೆ. ನೀರುಹಾಲಿಗೆ ಸಲ್ಲೋ ಅಷ್ಟಾದರೂ ಕೊಡಬೇಕಲ್ಲ" ಎಂದು ಗುಂಡಪ್ಪ ಇಬ್ಬರಿಗೂ ಸಮಾಧಾನವಾಗುವಂತೆ ನುಡಿಯಲು ಯತ್ನಿಸಿದ. ಗುಂಡಪ್ಪ ಹಾರಿಸಿದ ಹಾಸ್ಯದ ಚಟಾಕಿ ಹಿಂದು ಮುಂದಾಗಿ ಹೊಡೆಯಿತು. "ಹಾಲಿಗೆ ನೀರು ಬೆರಸ್ತೀನಿ ಅಂತ ಸುಬ್ಬಣ್ಣೋರು ಅಂದ್ರೆ ಅನ್ನಿಸಿಕೋಬೋದು. ಈಟುದಿನ ನಮ್ಮ ಮನೆ ಹಾಲು ಕುಡಿದು ನೀವು ಹಂಗಂದ್ರೆ ತಡೀತದಾ" ಎಂದು ಒಂದು ಕಡೆ ಹನುಮಕ್ಕ ಗುಂಡಪ್ಪನ ಮೇಲೆ ಸಿರ್ರನೆ ತುಂಟ ಹಸುವಿನ ಹಾಗೆ ಹಾಯ್ದು

ನುಡಿದಳು. ಇನ್ನೊಂದು ಕಡೆ ಸುಬ್ಬಣ್ಣನವರ ವ್ಯಂಗ್ಯದ ವಾಗ್ಬಾಣ: "ನಾನು ಹೇಳಿದ್ದೇನು ಸುಳ್ಳಾಯಿತೆ ಹನುಮಕ್ಕ ? ಗುಂಡಪ್ಪ ನಿನ್ನನ್ನು ವಹಿಸಿಕೊಂಡು ನುಡಿಯಲು ಕಾರಣ ಇದೆ ಅಂತ ಆಯಿತಲ್ಲ !" "ನಾಟಕದ ಕಂಪನಿಯೋರ ಜೊತೆ ಸೇರಿಕೊಂಡಿರೋ ನಿಮಗೆ ಗುಂಡಪ್ಪನ ಗುಣ ಎಲ್ಲಿ ಬರಬೇಕು?" ಎಂದು ಹನುಮಕ್ಕ ನಮ್ಮ ಮನೆಗೆ ಹಾಕಬೇಕಾಗಿದ್ದ ಹಾಲನ್ನು ಅಳೆದು, ಕೋಪದ ಭರದಲ್ಲಿ ಅರೆಪಾವಿನಷ್ಟು ಕೊಸರು ಬಿಟ್ಟು, ಹಾಲಿನ ಡಬ್ಬ ಹಿಡಿದು ಭರಭರನೆ ನಡೆದುಬಿಟ್ಟಳು. "ನಿಮ್ಮ ವಿಶ್ವಾಸ, ನಾನು ಯಾಕೆ ಅಡ್ಡಬರಲಿ ?" ಎಂದು ಸುಬ್ಬಣ್ಣನವರೂ ತಮ್ಮ ಮನೆಯ ಕಡೆ ನಡೆದರು. ಗುಂಡಪ್ಪ, ನಮ್ಮ ತಂದೆ, ಒಬ್ಬರ ಮುಖ ಒಬ್ಬರು ನೋಡುತ್ತ ನಿಂತರು. ಗುಂಡಪ್ಪನ ಮುಖ ಜೋತುಬಿದ್ದಿತ್ತು.

ಈ ಪ್ರಕರಣ ನಮ್ಮ ಮನೆಯಲ್ಲಿ ನಡೆದದ್ದು ನನ್ನ ಬಾಲ್ಯದಲ್ಲಿ, ಅನೇಕಾನೇಕ ವರ್ಷಗಳ ಹಿಂದೆ. ಇಂದು ನಗರದಲ್ಲಿ ಬೆರಕೆಯ ಹಾಲು ವ್ಯಾಪಾರವಾಗುವ ಸಂದರ್ಭವನ್ನು ನೆನೆದಾಗಲೆಲ್ಲ ನನಗೆ ಅಂದಿನ ಹಾಲಿನ ಹನುಮಕ್ಕನ ನೆನಪಾಗುತ್ತದೆ; ಬಗೆಜೇಡ ಅವಳ ನೆನಪಿನ ಸುತ್ತ ಬಲೆ ನೇಯತೊಡಗುತ್ತದೆ. ಬಗೆಯ ಬಲೆ ಸೆರೆಹಿಡಿದ ನೆನಪಿನ ಚಿತ್ರ ಇಂದಿನಷ್ಟು ಸ್ಫುಟವಾಗಿ ಮತ್ತೆಂದೂ ಮೂಡಿದ್ದಿಲ್ಲ. (ಇಂದು ಹಾಲಿನವಳೊಂದಿಗೆ ಹೋರಾಡಬೇಕಾಗಿ ಬಂದಿತ್ತು.) ಅದು ಅಳಿಸಿಹೋಗುವ ಮೊದಲೇ ಬರೆದಿಡಬೇಕೆಂಬ ಚಪಲಕ್ಕೆ ಮನಸೋತಿದ್ದೇನೆ.

ಸುಬ್ಬಣ್ಣನವರ ಕೊಂಕುಮಾತಿನ ಅರ್ಥ ನನಗೆ ಮೊದಲು ಆಗಲಿಲ್ಲ. ಹುಡುಗರ ಎದುರಿಗೆ ಅಂಥ ಮಾತಿಗೆಲ್ಲ ದೊಡ್ಡವರು ವ್ಯಾಖ್ಯಾನ ಮಾಡಿಯಾರೆ? ನಾವು ಕುಸ ದೊಡ್ಡವರಾದ ಮೇಲೆ, ಹಿರಿಯರು ಆಗೊಮ್ಮೆ ಈಗೊಮ್ಮೆ ಅನುದ್ದಿಷ್ಟವಾಗಿ ಆಡಿದ ಮಾತಿನ ಹಿಂದಿನ ಮಹಾಭಾರತವೆಲ್ಲಾ ಅಂಥ ಧೃತರಾಷ್ಟ್ರನ ಕಣ್ಮುಂದೆ ಹೇಗೋ ಹಾಗೆ ನಮ್ಮ ಕಣ್ಮುಂದೆ ಕಟ್ಟಿ ನಿಂತಂತಾಗುತ್ತಿದ್ದಿತು. ಕೇಳಿದ್ದು ಅಷ್ಟು, ಕಂಡದ್ದು ಇಷ್ಟು, ಊಹೆ ಇನ್ನಷ್ಟು, ಕಲ್ಪನೆ ಮತ್ತಷ್ಟು....ಇವುಗಳ ಅಪೂರ್ವ ಮಿಶ್ರಣದಿಂದ ಮೂಡಿ ನಿಲ್ಲುತ್ತಿದ್ದ ಅಂದಿನ 'ಅನುಭವ'ಗಳ ರಸಪ್ರಪಂಚ ಕಾಲಕ್ರಮದಲ್ಲಿ ಘನೀಭವಿಸಿ, ಇಂದು ನನ್ನ ಪಾಲಿಗೆ ಮಾರ್ಪಡಿಸಲಾಗದ ಸತ್ಯವಾಗಿದೆ. ನಾನು ಮರೆಯಲಾಗದ ನನ್ನ ಬಾಲ್ಯ ಯೌವನಗಳ ನೆನಪಿನ 'ಸತ್ಯಚಿತ್ರ'ಗಳಲ್ಲಿ ಹಾಲಿನ ಹನುಮಕ್ಕನದೂ ಒಂದು.

ತಾಯ ಹಾಲನ್ನು ಕುಡಿದು ಬೆಳೆದಿರುವಂತೆ, ಹನುಮಕ್ಕ ನಮ್ಮ ಮನೆಗೆ ತಂದುಹಾಕುತ್ತಿದ್ದ ಹಾಲನ್ನೂ ಕುಡಿದು ಬೆಳೆದಿದ್ದೇನೆ ; ಆ ಹಾಲು ಬೆರಕೆಯ

ದಾಗಿರಲಿ, ಅಪ್ಪಟವಾಗಿರಲಿ, ಆ ಮಾತು ಬೇರೆ ; ಹಾಗೆ ನೋಡ ಹೊರಟರೆ, ನೀರು ಬೆರಸದೆ ಹಾಲು ಮಾರುವವರು ಯಾವ ಕಾಲದಲ್ಲೂ ವಿರಳ. ಈ ಬಗ್ಗೆ, ಸುಬ್ಬಣ್ಣನವರೇಕೆ, ನಮ್ಮ ಮನೆಯವರೆಲ್ಲಾ ಹನುಮಕ್ಕನನ್ನು ದೂರುತ್ತಿದ್ದೆವು. ಆದರೂ, ನಮ್ಮ ಬೀದಿಯವರಿಗೆಲ್ಲಾ ಹನುಮಕ್ಕನ ಹಾಲೇ ಆಗಬೇಕು, (ನಮ್ಮ ತಾಯಿ ಹೇಳುತ್ತಿದ್ದಂತೆ 'ನೀರೋ ಬೋರೋ' ;) ಆಗಬೇಕು ಏನು, ನಮ್ಮ ಬೀದಿಯವರಿಗೆಲ್ಲಾ ಅವಳ ಹಾಲನ್ನು ಬಿಟ್ಟರೆ ಗತಿಯಿರಲಿಲ್ಲ. ಅದಕ್ಕೆ ಕಾರಣವೂ ಸುಸ್ಪಷ್ಟ : ಕೇಳಿದವರಿಗೆಲ್ಲ, ಕೇಳಿದಾಗಲೆಲ್ಲ, ಬೇಡ ಎನ್ನುವವರೆಗೂ ಹನುಮಕ್ಕ ಹಾಲಿನ ವರ್ತನೆ ಹಾಕುತ್ತಿದ್ದಳು ; ಸುಬ್ಬಣ್ಣನವರ ಮಾತಿನಲ್ಲಿ, 'ಎಲ್ಲರ ಜುಟ್ಟೂ ಅವಳ ಕೈಲಿ.' ನಮ್ಮದು ಬಡಹಾರುವರ ಅಗ್ರಹಾರ ; ದಿನಕ್ಕೆ ಅರೆಪಾವು ಕೊಳ್ಳುವವರೂ ಇದ್ದರು, ಆರುಪಾವು ಹಾಕಿಸಿಕೊಳ್ಳುವವರೂ ಇದ್ದರು. ಎರಡನೆಯ ವರ್ಗದ ಇಬ್ಬರು ಮೂವರು ನಮ್ಮ ಬೀದಿಯ 'ಶ್ರೀಮಂತರು.' ನಮ್ಮ ತಾಯಿ ತವರುಮನೆಯಿಂದ ಬಂದಾಗ ಒಂದು ಹಸುವನ್ನು ಬಳುವಳಿಯಾಗಿ ತಂದಿದ್ದರು ; ಅಂದಿನಿಂದಲೂ ನಮ್ಮ ಮನೆಯಲ್ಲಿ ಹಸು ಕಟ್ಟುವ ರೂಢಿ. ನಮ್ಮಂತೆ ಇನ್ನು ಒಬ್ಬಿಬ್ಬರ ಮನೆಯಲ್ಲೂ ಹಸು ಕಟ್ಟಿತ್ತು. ಆದರೆ, ನಮ್ಮಲ್ಲಿ ಯಾರಿಗೂ ಒಂದು ಹಸುವಿಗಿಂತ ಹೆಚ್ಚಾಗಿ ಸಾಕಲು ಸ್ಥಳವೂ ಇಲ್ಲ, ಚೈತನ್ಯವೂ ಇಲ್ಲ. ನಮ್ಮಂಥವರ ಮನೆಗಳಲ್ಲಿ ಹಸು 'ಮಾನಿಸಿ' (ಮಾಣಿಸಿ) ಕೊಂಡಾಗ ನಮಗೂ ಹನುಮಕ್ಕನೇ ಗತಿ. ಹೀಗೆ, ಹಾಲಿನ ಹನುಮಕ್ಕನೆಂದರೆ ನಮ್ಮ ಬೀದಿಯ ಹಸುಮಕ್ಕಳಿಂದ ಹಿಡಿದು ಮುದುಕರ ವರೆಗೆ ಎಲ್ಲರಿಗೂ ಪ್ರಾಣಾಧಾರಸ್ವರೂಪಳು. ಆದರೂ, ಎಲ್ಲರೂ ಅವಳನ್ನು ದೂರುವವರೆ : 'ಹನುಮಕ್ಕನ ಹಾಲಿನ ಮಜ್ಜಿಗೆ ಹೇಳತೀರದು, ಕಲಗಚ್ಚಾದರೂ ವಾಸಿ' ಎಂದು ನಮ್ಮ ತಾಯಿ ನಂಜಮ್ಮನವರೊಂದಿಗೆ ದೂರಿದರೆ, 'ಅಯ್ಯೋ, ಬಿಡಿ ಸಾವಿತ್ರಮ್ಮನವರೆ, ಅವಳ ಹಾಲಿನ ನಿತ್ಯಪುರಾಣ ಇದ್ದೇ ಇದೆ. ಹಾಲು ಹೆತ್ತರೆ ಅರ್ಧ ಗಟ್ಟಿ, ಅರ್ಧ ನೀರು ; ಜಂಡು ಜಂಡು, ಸಿಂಡುವಾಸನೆ. ಕಾಫಿಯೊ, ಕರೀ ನೀರು' ಎಂದು ಗೊಣಗುವರು. ಹೊತ್ತಿಗೆ ಸರಿಯಾಗಿ ಹಾಲು ತರುವುದಿಲ್ಲ ಎಂದು ಹಲವರ ಆಕ್ಷೇಪಣೆ. ಅದಕ್ಕೆ ಹನುಮಕ್ಕ ಏನು ಮಾಡಿಯಾಳು, ಪಾಪ ? ಅವಳೇ ಹೇಳುತ್ತಿದ್ದಂತೆ, "ಮೈಸೂರಿನಲ್ಲಿ ಮಳೇನೇ ಎಲ್ಲಾ ಕಡೇನೂ ಒಂದೇ ಟೇಮಿಗೆ ಹುಯ್ಯೋಕಿಲ್ಲ ; ಅಲ್ಲಿ ಹುಯ್ದರೆ ಇಲ್ಲಿಲ್ಲ, ಇಲ್ಲಿ ಹುಯ್ದರೆ ಅಲ್ಲಿಲ್ಲ. ಇನ್ನು ಎಲ್ಲರ ಮನೆಗೂ ಒಂದೇ ಟೇಮಿಗೆ ಹೆಂಗೆ ಹೂದು ಹೋಗಲಿ ಹಾಲನ್ನ ?" ಗುಂಡಪ್ಪ ಬದುಕಿದ್ದಾಗ, ಅವಳಿಗೆ ಒಂದು ಉಪಾಯ ಹೇಳಿ ಕೊಟ್ಟಿದ್ದ : "ನೀನು ನಿತ್ಯ ಬೀದಿಯ ಪಶ್ಚಿಮದ ಕೊನೆಯಿಂದ ಯಾಕೆ ಹಾಲು

ಹಾಕಲು ಪ್ರಾರಂಭಮಾಡುತ್ತೀ ? ಒಂದೊಂದು ದಿನ ಒಂದೊಂದು ಕಡೆಯಿಂದ ಮೊದಲುಮಾಡಿ ಹಾಕಿಕೊಂಡುಬಾ. ಪ್ರತಿಯೊಬ್ಬರನ್ನೂ ಸ್ವಲ್ಪ ಸ್ವಲ್ಪ ತೃಪ್ತಿ ಪಡಿಸಿದ ಹಾಗಾಗುತ್ತೆ." ಇದರ ಫಲ ಏನಾಯಿತೆಂದರೆ, ಎತ್ತ ಕಡೆಯಿಂದ ಪ್ರಾರಂಭಮಾಡಿದರೂ ನಮ್ಮ ಮನೆಗೆ ಕೊನೆಯಲ್ಲಿ ಬರುತ್ತಿದ್ದಳು ; "ನೀವು ಹೆಂಗೋ ಸವರಿಸಿಕೊಂತೀರ" ಎಂಬುದು, ನಮ್ಮ ತಾಯಿಯ ಮೃದು ಆಕ್ಷೇಪಕ್ಕೆ ಅವಳ ಸಮಾಧಾನ ವಾಕ್ಯ. ಗುಂಡಪ್ಪನ ಉಪಾಯದ ಉರುಲು ಅವನ ಕೊರಳಿಗೇ ಸುತ್ತಿಕೊಂಡಿತು : ಹೊತ್ತಿಗೆ ಮುಂಚೆ ಎದ್ದು ಹನುಮಕ್ಕನ ಮನೆಗೇ ಹೋಗಿ ಹಾಲು ತರುವ ಹೊಣೆ ಅವನ ಹೆಗಲಮೇಲೆ ಬಿತ್ತು.

ಹನುಮಕ್ಕನ ಮನೆಗೆ ನಮ್ಮ ಗುಮಾಸ್ತೆ ಗುಂಡಪ್ಪ ಮೊದಲು ಪ್ರವೇಶಿಸಿದ್ದು ಹೀಗೆ. ಕಾಲಕ್ರಮದಲ್ಲಿ ಗುಂಡಪ್ಪನ ನಯ ನುಡಿ, ಸಾಧು ಸ್ವಭಾವ, ಉಪಕಾರ ಬುದ್ಧಿ—ಇವು ಹನುಮಕ್ಕನಿಗೆ ಮೆಚ್ಚಾಗಿರಬೇಕು. "ಬೆಳಗಾಗೆದ್ದು ಬ್ರಾಂಬ್ರು ನಮ್ಮ ಮನೇಗೆ ಬರ್ತೀರಿ, ದೇವರು ಬಂದ ಹಾಗೆ. ನಾವು ಕೇಳಿಕೊಂಡರೆ ಬಂದೀರ ?" ಎಂದು ಆಗೊಮ್ಮೆ ಈಗೊಮ್ಮೆ ಕರೆದ ನೊರೆಹಾಲನ್ನು ಎದುರಿಗೆಯೇ ಕಾಯಿಸಿ, ಕುಡಿಯಕೊಡುತ್ತಿದ್ದಳಂತೆ. ಗುಂಡಪ್ಪ ಮೊದಲು, "ಇನ್ನೂ ಸ್ನಾನವಿಲ್ಲ ಸಂಧ್ಯಾವಂದನೆಯಿಲ್ಲ, ಬೇಡ" ಎಂದನಂತೆ. "ಹಾಲಿಗೆ ಕಟ್ಟಿಲ್ಲ, ಕುಡೀರಿ ಬುದ್ಧಿ. ನೀವೇ ನೋಡಿದ್ರಲ್ಲ, ಒಂದು ತೊಟ್ಟು ನೀರೂ ಹಾಕಿಲ್ಲ"–ಎಂದಳಂತೆ ಹನುಮಕ್ಕ. "ಅದಕ್ಕಲ್ಲ ಹನುಮಕ್ಕ, ನೀನು ನೀರು ಬೆರಸಿ ತಂದು ಹಾಕಿದ ಹಾಲನ್ನು ನಾವೆಲ್ಲಾ ಮನೆಯಲ್ಲಿ ಕುಡಿಯುವುದಿಲ್ಲವೇ ? ಅನ್ನದ ಋಣ ಹಾಲಿನ ಋಣ ತೀರಿಸುವುದು ಕಷ್ಟವಮ್ಮ. ಅದಕ್ಕೆ ಬೇಡ ಅಂದೆ" ಎಂದು ಗುಂಡಪ್ಪ ವಿವರಿಸಿದ. "ಅಂತೂ ಒಳ್ಳೇ ಮಾತಿನಲ್ಲೇ ನನಗೆ ಹಾಕಿಬಿಟ್ರಲ್ಲ ಏಟನ್ನ, ಹಾಲಿಗೆ ನೀರು ಬೆರಸ್ತೀನಿ ಅಂತ. ಅದು ಹೆಂಗಾರಾ ಇರಲಿ, ನೀವು ಇದನ್ನ ಋಣ ಅಂತ ಭಾವಿಸಬಾರ್ದು. ದೇವರಿಗೆ ನೈವೇದ್ಯ ಅಂತ ಒಪ್ಪಿಸ್ತಾ ಇದೀನಿ. ಒಪ್ಪಿಸ್ಕೋಬೇಕು. ಕುಡೀದೆ ಇರೋ ದೇವರಿಗೆ ಕೊಡೋ ದಕ್ಕಿಂತ ಕುಡಿಯೋ ದೇವರಿಗೆ ಕೊಡೋದು ಮೇಲಲ್ವಾ ? ನಿಮ್ಮ ಸೇವೇನ ನಾವು ಇನ್ನು ಹೆಂಗೆ ತಾನೇ ಮಾಡೇವು ? ನಮ್ಮ ಸೇವೆ ಒಪ್ಪಿಸಿಕೊಂಡು, ನನ್ನ ವಂಸ ಉದ್ಧಾರ ಆಗೋ ಹಂಗೆ ಹರಕೆ ಮಾಡಿ ಬುದ್ಧಿ" ಎಂದು ಹನುಮಕ್ಕ ಮತ್ತೆ ಬಲಾತ್ಕಾರ ಮಾಡಿದಳಂತೆ. ಗುಂಡಪ್ಪನ ಮನಸ್ಸು ಕರಗಿತು ; ಹನುಮಕ್ಕ ಕೊಟ್ಟ ಹಾಲನ್ನು ಸೇವಿಸಿದನು. ಅದೇ ರೂಢಿಗೆ ಇಟ್ಟುಕೊಂಡಿತು. ಗುಂಡಪ್ಪ ಈ ವಿಚಾರವನ್ನು–ಸಂಕೋಚದಿಂದ ಎಂದು ಕಾಣುತ್ತದೆ–ನಮ್ಮ ಮನೆಯಲ್ಲಿ ಹೇಳಿಕೊಂಡಿರಲಿಲ್ಲ. ಹನುಮಕ್ಕನ ಗುಣ

ಹೊಗಳಲು ಸುಬ್ಬಣ್ಣನವರಲ್ಲಿ ಎಂದೋ ಹೇಳಿಕೊಂಡಿದ್ದನಂತೆ. ಗುಂಡಪ್ಪ ಹೇಳಿದ್ದ ಈ ಸಂಗತಿಗೆ ಹೊಸಬಣ್ಣ ಕಟ್ಟಿ ಸುಬ್ಬಣ್ಣನವರು ನಮ್ಮ ತಂದೆಯ ಎದುರಿಗೆ ಎತ್ತಿ ಆಡಿದ್ದು, ಆತನ ಮನಸ್ಸಿಗೆ ತುಂಬ ನೋವಾಗಿತ್ತು; ಮುಖ ಭಂಗವಾಗಿ, ಮುಖ ಜೋತುಬಿತ್ತು. ಅಂದಿನಿಂದ, ಗುಂಡಪ್ಪ ಹನುಮಕ್ಕನ ಮನೆಗೆ ಯಾವ ಕಾರಣಕ್ಕೇ ಆಗಲಿ ಹೋಗುವುದನ್ನು ನಿಲ್ಲಿಸಿಬಿಟ್ಟ.

ಹಾಲು ತರುವುದು ಮಾತ್ರವಲ್ಲದೆ ಇತರ ಕಾರಣಗಳಿಗಾಗಿಯೂ ಗುಂಡಪ್ಪ ಹನುಮಕ್ಕನ ಮನೆಗೆ ಆಗಾಗ್ಗೆ ಹೋಗಿಬರುತ್ತಿದ್ದುದುಂಟು. ನಮ್ಮ ಮನೆಯಲ್ಲಿ ಹಸು ಕಟ್ಟುವ ಪ್ರಸ್ತಾಪ ಮೇಲೆ ಬಂದಿದೆಯಷ್ಟೆ. ನಮ್ಮ ಮನೆಯ ಗೋಸೇವೆಯ ಸಂಪೂರ್ಣ ಭಾರವನ್ನು ಗುಂಡಪ್ಪ ವಹಿಸಿಕೊಂಡುಬಿಟ್ಟಿದ್ದ. ನಮ್ಮ ಮನೆಯಲ್ಲೇ ಇದ್ದುಕೊಂಡಿದ್ದ ಗುಂಡಪ್ಪ ಈ ಗೋಸೇವೆಯನ್ನು ಬಹು ಶ್ರದ್ಧೆಯಿಂದ ಮಾಡುತ್ತಿದ್ದ. ಹನುಮಕ್ಕನ ಮನೆಯ ಹತ್ತಿರ ಜೋಳದಕಡ್ಡಿ ಹೊರೆ ಹುಲ್ಲಿನಹೊರೆ ಇವನ್ನು ಮಾರಾಟಕ್ಕೆ ಇಟ್ಟುಕೊಳ್ಳುತ್ತಿದ್ದರು ಹಳ್ಳಿ ಯವರು. ಗುಂಡಪ್ಪ ಎಷ್ಟೋವೇಳೆ ಹನುಮಕ್ಕನ ಕೈಲಿ ದುಡ್ಡು ಕೊಟ್ಟು ಜೋಳದಕಡ್ಡಿಹೊರೆ ವ್ಯಾಪಾರಮಾಡಿ ನಮ್ಮ ಮನೆಗೆ ಕಳಿಸಿಕೊಡುವ ಹಾಗೆ ಹೇಳುತ್ತಿದ್ದ; ತೊಗರಿಹೊಟ್ಟು, ನುಚ್ಚು, ತವುಡು, ಎಳ್ಳುಹಿಂಡಿ ಇವು ಗಳನ್ನು ಕೊಳ್ಳುವುದರಲ್ಲಿಯೂ ಹನುಮಕ್ಕನ ನೆರವು ಪಡೆಯುತ್ತಿದ್ದ; ನಮ್ಮ ಹಸುವಿಗೆ ಮದ್ದು ಮಾಡಬೇಕಾದ ಸಂದರ್ಭದಲ್ಲಿ, ಅನುಭವಸ್ಥೆ ಎಂದು ಅವಳ ಸಲಹೆ ಪಡೆಯುತ್ತಿದ್ದ; ಹನುಮಕ್ಕನ ಮನೆಯ ಹಸುವನ್ನು ಯಾರಾದರೂ ದೊಡ್ಡಿಗೆ ಕೂಡಿದ್ದರೆ, “ಹಸು ಬಿಡಿಸಿಕೊಂಡು ಬರುವುದೂ ಒಂದು ಪುಣ್ಯ ಕಾರ್ಯ. ಅಲ್ಲದೆ, ಹನುಮಕ್ಕನಿಗೆ ಗಂಡುದಿಕ್ಕಿಲ್ಲ” ಎಂದು ಅವಳ ಮನೆಯ ಹಸು ಬಿಡಿಸಿಕೊಂಡುಬರುತ್ತಿದ್ದ. ಈ ಮುಂತಾದ ಕಾರಣಗಳಿಂದ, ಆಬಾಲ್ಯ ಬ್ರಹ್ಮಚಾರಿಯಾದ ಗುಂಡಪ್ಪ ಹನುಮಕ್ಕನ ಮನೆಗೆ ಹಗಲೂ ಸಂಜೆ ಹೋಗಿ ಬರುತ್ತಿದ್ದುದು ರೂಢಿ. ಈ ಹೊತ್ತಿಗಾಗಲೇ ಹನುಮಕ್ಕನ ಮತ್ತು ಅವಳ ಮಗಳ ನಡತೆಯ ಕುರಿತು ನಮ್ಮ ಬೀದಿಯವರೆಗೂ ಪಿಸುಮಾತು ಕೇಳಿ ಬಂದಿತ್ತು. ಸುಬ್ಬಣ್ಣನವರು ಇದ್ದಕ್ಕಿದ್ದಹಾಗೆ ಹನುಮಕ್ಕನ ಮೇಲೆ ರೇಗಿ ದಾಗ, ಪಿಸುಮಾತನ್ನು ಹನುಮಕ್ಕನ ಎದುರಿಗೆಯೇ ಗಟ್ಟಿಯಾಗಿ ಆಡಿ ಬಿಟ್ಟಿದ್ದರು; ವ್ಯಂಗ್ಯವಾಗಿ ಗುಂಡಪ್ಪನಿಗೂ ಹನುಮಕ್ಕನಿಗೂ ಸಂಬಂಧ ಕಲ್ಪಿಸಿ ಬಿಟ್ಟಿದ್ದರು. ಮೊದಲೇ ಹೇಳಿದಂತೆ, ಅಂದಿನಿಂದ, ಇದ್ದಕ್ಕಿದ್ದಹಾಗೆಯೇ ಗುಂಡಪ್ಪ ಹನುಮಕ್ಕನ ಮನೆಗೆ ಸುಳಿಯುವುದನ್ನೂ ಬಿಟ್ಟುಬಿಟ್ಟ. ಹಾಲು ತರುವುದು ಮುಂತಾದ ಗುಂಡಪ್ಪನ ಪಾಲಿನ ಕೆಲಸಗಳೆಲ್ಲ ನನ್ನ ಅಣ್ಣನ, ನನ್ನ

ಪಾಲಿಗೆ ಬಂದುವು. ಆಗಿನಿಂದ, ಹನುಮಕ್ಕನ ಮನೆಯ ಒಳನೋಟ-ಬದುಕು-ಸ್ಥೂಲವಾಗಿ ನನಗೆ ಪರಿಚಯವಾಗತೊಡಗಿದವು.

ಗುಂಡಪ್ಪ ತನ್ನ ಮನೆಗೆ ಬರದೆ ನಿಂತದ್ದಕ್ಕೆ ಕಾರಣ ಏನಿರಬಹುದೆಂದು ಹನುಮಕ್ಕನಿಗೆ ಹೊಳೆಯಲು ಬಹಳಕಾಲ ಹಿಡಿಯಲಿಲ್ಲ. ಒಂದು ದಿನ, ನಾನು ಅವಳ ಮನೆಗೆ ಹಾಲು ತರಲು ಹೋಗಿದ್ದಾಗ, "ನೋಡಿದೆಯಾ ರಾಮಪ್ಪ, ನಿಮ್ಮ ಬೀದಿ ಜನ ನಮ್ಮನ್ನ ಸೂಳೇರು ಅಂತ ಮಾಡಿಬುಟ್ಟವರೆ. ನೀನು ಅರೀದ ಕೂಸು, ಪರವಾಗಿಲ್ಲ. ನಿಮ್ಮ ಅಣ್ಣ ಪ್ರಾಯಕ್ಕೆ ಬಂದೋನು, ಹೆಂಡತಿ ಮನೆಗೆ ಬಂದಿಲ್ಲ, ಅವ ಈಕಡೆ ಸುಳಿಯೋದು ಬೇಡ. ನನ್ನ ಮಗಳಿಗೂ ಅವನಿಗೂ ಗಂಟು ಹಾಕಿಯಾರು ಜನ, ಆದೆಲ್ಲಿ ಗ್ರಾಚಾರ. ಗುಂಡಪ್ಪ ಈ ಕಡೆ ಬರದಹಾಗೆ ಮಾಡವನೆ ಆ ಸುಬ್ಬಣ್ಣ. ಗುಂಡಪ್ಪನ ಗುಣ ಅವಂಗೆಲ್ಲಿ ಬರ್ಬೇಕು ? ತನ್ನ ವೈನಕ್ಕೆ ಎಲ್ಲರನ್ನೂ ಆಡ್ಕೋತಾನೆ...." ಎಂದು ಮುಂತಾಗಿ ನನಗೆ ಅಷ್ಟಾಗಿ ಆಸಕ್ತಿಯಿಲ್ಲದಿದ್ದ ಮಾತುಗಳನ್ನು ನನ್ನ ಕಿವಿಗೆ ತುರುಕಿದಳು. (ನನ್ನ ಆಸಕ್ತಿಯೆಲ್ಲ ಅವಳ ಕಾಲಿಗೆ ಮೈ ಉಜ್ಜುತ್ತ ಹೊದರುಬಾಲ ನಿಮಿರಿಸಿಕೊಂಡು, ಮೂತಿ ಎತ್ತಿ 'ಮಿಯಾಂವ್'ಗುಟ್ಟುತ್ತ ಸುತ್ತಿ ಸುಳಿಯುತ್ತಿದ್ದ ಹಾಲು ಬಿಳುಪಿನ ಬೆಕ್ಕಿನ ಮೇಲಿತ್ತು.) ಅಷ್ಟಕ್ಕೆ ಸುಮ್ಮನಾಗದೆ ನಮ್ಮ ತಂದೆತಾಯಿಯ ಕೂಡ ಗುಂಡಪ್ಪನ ನಿರ್ದೋಷಿತ್ವವನ್ನು ನಮ್ಮೆಲ್ಲರ ಮೇಲೆ ಆಣೆಯಿಟ್ಟು ಘೋಷಿಸಿದಳು. ಹಾಗೆ ಹೇಳುವಾಗ, ಅವಳ ಕಣ್ಣಲ್ಲಿ ಅದು ಏನೋ ಮರುಕದ ಕಣ್ಣೀರು ; ಸುಬ್ಬಣ್ಣ, ಬೀದಿಯ ಜನ, ಏನಾದರೂ ಅಂದುಕೊಂಡಿರಲಿ,- ತನಗೆ ಆಶ್ರಯದಾತರಾಗಿದ್ದ ನಮ್ಮ ತಂದೆತಾಯ ದೃಷ್ಟಿಯಲ್ಲಿ ತಾನು ನಿರ್ದೋಷಿ ಎಂದು ಕಂಡುಬಂದೆನಲ್ಲಾ ಎಂದು ಗುಂಡಪ್ಪನ ಕಣ್ಣಲ್ಲೂ ಆನಂದಬಾಷ್ಪ. "....ಆವೊತ್ತಿನಿಂದ ನಿನ್ನದು ಅದು ಏನೋ ಕೊರಗು, ನನಗೆ ಅರ್ಥವೇ ಆಗಿರಲಿಲ್ಲ. ಇವೊತ್ತು ಅರ್ಥವಾಯಿತು. ಸುಬ್ಬಣ್ಣನೂ ಅಂಥವನಲ್ಲ, ಹಾಸ್ಯಕ್ಕೆ ಹಾಗೆ ಅಂದಿರಬೇಕು. ಜನ ಸಾವಿರ ಅಂದುಕೊಳ್ಳಲಿ, ನಾವು ಹೆದರಬೇಕಾಗಿಲ್ಲ. ಜನ ಮೆಚ್ಚಿಸುವುದಕ್ಕೆ ಜನಾರ್ದನನ ಕೈಲೂ ಸಾಧ್ಯವಿಲ್ಲ...." ಎಂದು ಮುಂತಾಗಿ ನಮ್ಮ ತಂದೆ ಗುಂಡಪ್ಪನಿಗೆ ಸಮಾಧಾನ ಹೇಳಿದರು. "ಹಾಗಲ್ಲ ವೆಂಕಟರಮಣಯ್ಯ, ನನಗೆ ಈಗ ಅನುಭವಕ್ಕೆ ಬಂತು. ನಮ್ಮ ಅಂತರಾತ್ಮ ಮೆಚ್ಚುವಂತೆ ನಾವು ಸರಿಯಾಗಿ ನಡೆದುಕೊಳ್ಳಬೇಕು ಮಾತ್ರವಲ್ಲ, ಜನಕ್ಕೂ ಅದು ಗೊತ್ತಾಗುವಂತಿರಬೇಕು. ನಾವು ಕುಡಿಯುವುದು ಮಜ್ಜಿಗೆಯಾದರೂ ಈಚಲಮರದ ಕೆಳಗೆ ಕುಳಿತು ಕುಡಿಯಬಾರದು. ಗಂಡು ದಿಕ್ಕಿಲ್ಲದ ಮನೆಗೆ ನಾನು ಹೋಗಿ ಬರುತ್ತಿದ್ದುದೇ ತಪ್ಪು" ಎಂದು ಗುಂಡಪ್ಪ ನೊಂದು ನುಡಿದ. "ಬಿಡಿ ಬಿಡಿ

ಗುಂಡಪ್ಪೋರೆ. ನಿಮ್ಮದೆಲ್ಲೀ ಮಾತು. ನಾವು ಸರಿಯಾಗಿದ್ದಮೇಲೆ ಜನಕ್ಕೆ ಯಾಕೆ ಹೆದರಬೇಕು ? ಜನವಂತೆ ಜನ, ಜನಕ್ಕಿಷ್ಟು ಬೆಂಕಿ ಬೀಳ" ಎಂದು ಹನುಮಕ್ಕ ಸಾತ್ತ್ವಿಕ ಕೋಪದಿಂದ ಗುಡುಗುತ್ತ ನಡೆದುಬಿಟ್ಟಳು.

ಹನುಮಕ್ಕ ಹೊರಟುಹೋದಮೇಲೆ, ನಮ್ಮ ತಂದೆ ಗುಂಡಪ್ಪನನ್ನು ಪ್ರಶ್ನಿಸಿದರು : "ಸುಬ್ಬಣ್ಣನ ಮಾತು ಹಾಗಿರಲಿ. ಹನುಮಕ್ಕ ಅಂಥವಳು ಇಂಥವಳು ಅಂತ ಜನವೂ ಆಡಿಕೊಳ್ಳುತ್ತಾರಲ್ಲ, ನಿನಗೆ ಹೇಗೆ ತೋರುತ್ತೆ ? ಹೇಗೂ ನೀನು ಅವಳ ಮನೆಗೆ ಹೋಗಿ ಬರುತ್ತಿದ್ದೆಯಲ್ಲಾ, ನಿನಗೆ ಸುಳಿವು ಹತ್ತಿರಬೇಕು. ತಿಪ್ಪೆ ಇದ್ದ ಕಡೆ ನಾಯಿ ಮಲಗದೆ ಇರುತ್ತೆಯೆ ?"

ಗುಂಡಪ್ಪ ತುಸ ಹೊತ್ತು ಸುಮ್ಮನೆ ಇದ್ದು, ಆಮೇಲೆ ಹನುಮಕ್ಕನ ವಿಚಾರ ತನಗೆ ತಿಳಿದಷ್ಟನ್ನು ನಮ್ಮ ತಂದೆಗೆ ತಿಳಿಯಹೇಳಿದ : "ಜನ ಅಂದು ಕೊಳ್ಳುವುದು ನನ್ನ ಕಿವಿಗೂ ಬೀಳದೆ ಇಲ್ಲ. ಸುಬ್ಬಣ್ಣನೇ ಹರಡಿದನೋ, ತಾನಾಗಿಯೇ ಹಬ್ಬಿತೋ, ಅಂತೂ ಒಬ್ಬಿಬ್ಬರು ನಾನು ಹನುಮಕ್ಕನ ಮನೆಗೆ ಹೋಗಿ ಬರುತ್ತಿದ್ದದ್ದನ್ನ ತಪ್ಪು ತಿಳಿದುಕೊಂಡು ಆಡಿಕೊಂಡದ್ದು ನನ್ನ ಕಿವಿಗೂ ಬಿದ್ದಿದೆ. ಜಗಲಿ ಜೋಯಿಸರೇ ಒಂದು ದಿನ ನಗುನಗುತ್ತ 'ನಿಜವೇ ?' ಅಂತ ನನ್ನ ಕೇಳಿದರು. 'ನನ್ನ ಕೈ ನೋಡಿ, ದಷ್ಟರೇಖೆ ಇದೆಯೆ ?' ಅಂತ ಅವರ ಮುಂದೆ ಕೈ ನೀಡಿದೆ. ಅವರು ನಕ್ಕುಬಿಟ್ಟು, 'ನಿನ್ನ ವಿಚಾರ ನನಗೆ ಗೊತ್ತಿಲ್ಲವೆ, ಗುಂಡಪ್ಪ ? ಅದಿರಲಿ. ನೀನೋ ಆಬಾಲಬ್ರಹ್ಮಚಾರಿ, ಹನುಮಕ್ಕ ಚೆಲುವೆ, ಜೊತೆಗೆ ವಿಧವೆ. ತಾಯಿಯಂತೆ ಅವಳ ಮಗಳು. ಮೊಮ್ಮಗಳು ಕೂಡ ಇದೇ ತಾನೆ ಬಿರಿಯುತ್ತಿರುವ ಸೊಗಸಾದ ಮೊಗ್ಗು. ಹೀಗಿರುವಾಗ, ನಿನ್ನ ವಿಚಾರ ಆಡಿಕೊಂಡರೆ ಅದರಲ್ಲಿ ತಪ್ಪೇನು ? ಪ್ರತ್ಯಕ್ಷ ಪ್ರಮಾಣ ಎಂದು ಎನ್ನು ತ್ತಾರೆಯೇ ವಿನಾ, ನನ್ನ ಜ್ಯೋತಿಷ್ಯ ಸಾಮುದ್ರಿಕಗಳಿಗೆ ಜನ ಬೆಲೆ ಕೊಡು ತ್ತಾರೆಯೇ ?' ಅಂತ ಎಚ್ಚರಿಕೆ ಕೊಡುವ ರೀತಿಯಲ್ಲಿ ಹೇಳಿದರು. ನಾನು ಆಗ ಅವರ ಎಚ್ಚರಿಕೆಗೆ ಬೆಲೆ ಕೊಡಲಿಲ್ಲ. ಅದು ಹೇಗಾದರೂ ಇರಲಿ, ನನಗೆ ತೋರಿದಮಟ್ಟಿಗೆ ಹನುಮಕ್ಕ ಅಂಥವಳಲ್ಲ...." ಎಂದು ಮುಂದುವರಿಸಿ, ಹನುಮಕ್ಕನ ಬಗೆಗೆ ತನ್ನ ಅನುಭವಕ್ಕೆ ಬಂದಿದ್ದ ಸಂಗತಿಗಳನ್ನು ನಿರೂಪಿಸಿದ.

ಗುಂಡಪ್ಪನ ನಿರೂಪಣೆ, ನನ್ನ ಅನುಭವ–ಎರಡೂ ಒಂದಕ್ಕೊಂದು ಪೋಷಕ. ಹನುಮಕ್ಕನ ಸುತ್ತ ಕಥೆ ಹೆಣೆದುಕೊಳ್ಳುವುದಕ್ಕೆ ಮುಖ್ಯ ಕಾರಣ ಅವಳ ಚೆಲುವು ಎಂಬುದರಲ್ಲಿ ಸಂಶಯವಿಲ್ಲ. ನನ್ನ ಹುಡುಗುತನದ ಭಾವನೆ ಯಲ್ಲಿ ಚೆಲುವು ಎಂದರೆ ಬಿಳಿಯ ಬಣ್ಣ. 'ಬಣ್ಣ ಸಾವಿರ ಡೊಂಕು ಮುಚ್ಚಿತು' ಎನ್ನುವ ಸಾಮಾನ್ಯ ಜನರ ಕಲ್ಪನೆಯೂ ಅದೇ. ಬಣ್ಣಕ್ಕೆ ಬೆರಗಾಗುವ

ಸಾಮಾನ್ಯ ಜನ ಕೂಡ ಹನುಮಕ್ಕನನ್ನು ನೋಡಿದ ಮೇಲೆ ತಮ್ಮ ಭಾವನೆಯನ್ನು ಮಾರ್ಪಡಿಸಿಕೊಂಡಾರು. ಅವಳ ಸೌಂದರ್ಯ ಬೇಲೂರು ಶಿಲಾಬಾಲಿಕೆಯರ ಸೌಂದರ್ಯ ಎಂದು ಒಂದು ವಾಕ್ಯದಲ್ಲಿ ಸೂಚಿಸಿದರೆ ಸಾಕು ; ಹೆಚ್ಚಿನ ವರ್ಣನೆ ಅನಾವಶ್ಯಕ. ಹಣೆಗೆ ಕುಂಕುಮವಿಲ್ಲ ಎನ್ನುವುದು ಒಂದು ಹೊರತು, ವಸ್ತ್ರ ಒಡವೆಗಳಿಗೆ ಕೊರತೆ ಮಾಡಿಕೊಂಡಿರಲಿಲ್ಲ ಹನುಮಕ್ಕ. ಮೈತುಂಬ ಹಾಕಿದ್ದ ಅವಳ ಚಿನ್ನದ ಒಡವೆ ಅವಳ ದೇಹಕಾಂತಿಗೆ ಹೆಚ್ಚಿನ ಒಪ್ಪ ಕೊಟ್ಟಿದ್ದುವು. ಒಬ್ಬಿಬ್ಬರು ಹೊರತಾಗಿ, ನಮ್ಮ ಬೀದಿಯ ಜನ ಹನುಮಕ್ಕನನ್ನು ಕಂಡುಬಲ್ಲುದೇ ಹೊರತು, ಅವಳ ಮಗಳನ್ನು, ಮೊಮ್ಮಗಳನ್ನು ಕಾಣರು. ಕಂಡಿದ್ದರೆ, 'ಓ ! ಅದು ಎಂದೋ ಅರಳಿ ಬಾಡುತ್ತಿರುವ ಹೂ. ಇವು, ಒಂದು ಚೆನ್ನರಳಿದ ಹೂ, ಇನ್ನೊಂದು ಬಿರಿ ಮುಗುಳು' ಎಂದು ಮೂಗಿನಮೇಲೆ ಬೆರಳಿಡುತ್ತಿದ್ದರು. ಹೂವು ಮೊಗ್ಗು ಇದ್ದ ಕಡೆ ದುಂಬಿ ಹಿಂಡು ಹಿಂಡೆ. ಗಂಡು ದಿಕ್ಕಿಲ್ಲ ಎಂದು ತಿಳಿದಮೇಲೆ, ಹನುಮಕ್ಕನ ಮನೆಗೆ ಕಾಲಿಟ್ಟ ಯಾವ ಗಂಡುತಾನೆ ಒಡನೆಯೇ ಅಲ್ಲಿಂದ ಕಾಲು ಕೀಳಲು ಮನಸ್ಸು ಮಾಡಿಯಾನು ? ಹಾಲು ಕೊಳ್ಳುವವರು, ಹಾಲು ಮಾರಬರುವವರು, ಹುಲ್ಲುಹೊರೆ ವ್ಯಾಪಾರ ಮಾಡುವವರು, ದನಗಳ ಮಾರಾಟದ ದಳ್ಳಾಳಿಗಳು,-ಹೀಗೆ ಬೆಳಗ್ಗೆಯಿಂದ ಸಂಜೆಯವರೆಗೆ ಹಲವಾರು ಮಂದಿ ಹನುಮಕ್ಕನ ಮನೆ ಹೊಕ್ಕು ಬರುವುದನ್ನು ಯಾರಾದರೂ ಕಾಣಬಹುದು. ಒಳಗಿನ ವ್ಯಾಪಾರ ವ್ಯವಹಾರ ಏನೇ ಇರಲಿ, ಹೊರಕ್ಕೆ ಕಾಣುವಂತೆ ಈ ಸಂದರ್ಭ ಸಂಶಯಕ್ಕೆ ಎಡೆಗೊಡುವಂತಹುದೇ. ಗುಂಡಪ್ಪನ ಮನಸ್ಸು ಹೇಗೋ, ದೈವ ಬಲ್ಲುದು ; ಅಂತೂ, ಗುಂಡಪ್ಪ ಕೂಡ ಹನುಮಕ್ಕನೊಂದಿಗೆ, ಅವಳ ಮಗಳೊಂದಿಗೆ ಸರಸಸಲ್ಲಾಪದಲ್ಲಿ ತೊಡಗಿರುತ್ತಿದ್ದುದನ್ನು ನಾನು ಕಂಡುಬಲ್ಲೆ. ಹನುಮಕ್ಕನ ಮೊಮ್ಮಗಳು ಪಾರ್ವತಿಯೊಂದಿಗೆ ಬೆಕ್ಕಿನಮರಿ ಆಡಿಸುತ್ತ ನಾನೇ ಕಾಲಕಳೆಯುತ್ತಿದ್ದೆ ಅವಳ ಮನೆಯಲ್ಲಿ. ಆ ಮೂವರಿಗೂ ಎಲೆಯಡಕೆಯ ಹುಚ್ಚು. ಬಂದವರೆಲ್ಲಾ, "ಎಲ್ಡೆಲೆ ಒಂದೀಟು ಕಡ್ಡೀಹುಡಿ ಕೊಡು ಹನುಮಕ್ಕ" ಎಂದು ಕೇಳುವವರೆ ; ತಾಂಬೂಲ ಜಗಿಯುತ್ತ, ಹರಟೆ ಹೊಡೆಯುತ್ತ, ಆರಾಮವಾಗಿ ಕೂರುವವರೆ. ಹೀಗೆ, ಹನುಮಕ್ಕನಿಗೆ ಗಂಡು ದಿಕ್ಕಿಲ್ಲ ಎನ್ನುವ ಮಾತೊಂದು ಇದ್ದಿತೆ ಹೊರತು, ದೊಡ್ಡ ಕೆಲಸ ಸಣ್ಣ ಕೆಲಸ ಕಷ್ಟದ ಕೆಲಸ ಸುಲಭದ ಕೆಲಸ ಹೊರಗಿನ ಕೆಲಸ ಒಳಗಿನ ಕೆಲಸ ಎನ್ನದೆ ಯಾವ ಹೊತ್ತಿನಲ್ಲಿ ಯಾವ ಕೆಲಸ ಬೇಕಾದರೂ ಮಾಡಿಕೊಡಲು ಒಂದು ಗಂಡುಪಡೆಯೇ ಸಿದ್ಧವಾಗಿತ್ತು. ಇದಕ್ಕೆ ಕಾರಣ, ಪ್ರತಿ

ಯೊಬ್ಬರೂ ಅವಳ ದಾಕ್ಷಿಣ್ಯಕ್ಕೆ ಒಳಗಾಗಿದ್ದರು ; ಅವಳಿಂದ ಒಂದಲ್ಲ ಒಂದು ಬಗೆಯ ಉಪಕಾರ ಹೊಂದಿದ್ದರು. ತಾಯಿ-ಮಗಳ ಮೋಹಕ ಸೌಂದರ್ಯವೂ ಗಂಡು ಕಣ್ಣುಗಳಿಗೆ, ಗುಂಡಪ್ಪ ವಿವರಿಸಿದಂತೆ, 'ನೋಡಿಯಾದರೂ ಸುಖಪಡುವ ಗಿಲಿ' ಹಿಡಿಸಿರಬೇಕು.

ಅಂತೂ, ಹನುಮಕ್ಕನ ಮನೆಗೆ ಗಂಡಸರು 'ತುಕ್ಕಾಡು'ತ್ತಿದ್ದುದನ್ನು ನಮ್ಮ ಬೀದಿಯ ಜನವೆಲ್ಲ ಬಲ್ಲರು ; ಹನುಮಕ್ಕ ವಿಧವೆ, ಅವಳ ಮಗಳೂ ವಿಧವೆ-ಎಂಬುದನ್ನೂ ಬಲ್ಲರು ; ತಾನು ಕೆಟ್ಟು, ಮಗಳನ್ನು ಕೆಡಿಸಿ, ಮೊಮ್ಮಗಳನ್ನು ತಯಾರು ಮಾಡುತ್ತಿದ್ದಾಳೆ ಅವಳು ಎಂದು ಕೆಲವರ ಕುತರ್ಕದ ಟೀಕೆ. ಹನುಮಕ್ಕ ನಡತೆಗೆಟ್ಟವಳಲ್ಲದಿದ್ದರೆ ಅವಳ ಮೈಮೇಲೆ ಅಷ್ಟೊಂದು ಚಿನ್ನದ ಒಡವೆ ಹೇಗೆ ಬರಬೇಕು, ಅದೂ ಗಂಡ ಸತ್ತಮೇಲೆ ?-ಎಂಬ ಒಬ್ಬಿಬ್ಬರ ಸಂದೇಹದ ಪ್ರಶ್ನೆ ಹಲವರಿಗೆ ನ್ಯಾಯವಾಗಿ ಕಂಡಿತು. "ಹಾಲಿನ ಗಳಿಕೆ ಹಾಗವಾದರೆ ನೀರಿನ ಗಳಿಕೆ ಮುಪ್ಪಾಗ, ಹಣ ಮಾಡುವುದೇನು ಕಷ್ಟ ?" ಎಂಬ ಸುಬ್ಬಣ್ಣನ ವಿವರಣೆ ಕಡೇ ಮನೆಯ ಕುಂಟ ಶಾಮಣ್ಣನವರಿಗೆ ಹಿಡಿಸಲಿಲ್ಲ ; "ಹಾಗೂ ಸಂಪಾದನೆ ಮಾಡಿರಬಹುದು. ಆದರೆ, ಗಂಡ ಸತ್ತ ಮುಂಡೆಗೆ ಅವರ ಜಾತಿಯಲ್ಲಿ ಮುಂಡನವಂತೂ ಇಲ್ಲ. ಮುಂಡನದ ಮೆರೆತ ಏಕೆ ಸ್ವಾಮಿ ?" ಎಂದು ಅವರ ಸವಾಲು. ಈ ಸವಾಲಿಗೆ ಸುಬ್ಬಣ್ಣ ಕೂಡ ಉತ್ತರ ಹೇಳಲಾಗದೆ, ಹನುಮಕ್ಕನ ಬಗೆಗೆ ದುರಭಿಪ್ರಾಯವನ್ನು ಬೆಳಸಿಕೊಂಡರು.

ಒಂದು ದಿನ ಜಗಲಿ ಜೋಯಿಸರ ಸಮ್ಮುಖದಲ್ಲಿಯೇ ಸುಬ್ಬಣ್ಣನವರಿಗೂ ಗುಂಡಪ್ಪನಿಗೂ ಈ ಬಗ್ಗೆ ವಾಗ್ವಾದ ನಡೆಯಿತಂತೆ. ಗುಂಡಪ್ಪ ತಾನು ಸ್ವತಃ ಕಂಡು ಕೇಳಿ ತಿಳಿದದ್ದನ್ನು ಹೇಳಿದ : "ನಾನು ಚೆನ್ನಾಗಿ ಬಲ್ಲೆ, ನನ್ನ ಮಾತು ನಂಬಿ. ಹನುಮಕ್ಕನ ಹೆಂಡಕುಡುಕ ಗಂಡ ಯಾವಳನ್ನೋ ಕಟ್ಟಿಕೊಂಡು ಓಡಿಹೋದ. ಅವನು ಬಿಟ್ಟುಹೋದ ಆಸ್ತಿ ಎಂದರೆ ಒಂದು ಎಮ್ಮೆ. ಹನುಮಕ್ಕ ದುಡಿದು ದುಡಿದು ಮೂರು ಎಮ್ಮೆ, ಮೂರು ಹಸು ಕಟ್ಟಿದಳು. ಒಬ್ಬಳ ಹೊಟ್ಟೆಗೆ ಎಷ್ಟಾಗಬೇಕು ? ಹೆಚ್ಚಿನ ಸಂಪಾದನೆಯನ್ನು ಕೂಡಿಡುತ್ತ ಬಂದಳು. ಕೂಡಿಟ್ಟ ಹಣ ಕಳ್ಳರ ಪಾಲಾಗಬಹುದು ಎಂಬ ಹೆದರಿಕೆ ಹತ್ತುತ್ತ ಬಂತು. ಹಣವನ್ನು ಅವರಿವರಿಗೆ ಸಾಲ ಕೊಡಲು ಮೊದಲು ಮಾಡಿದಳು. ಗಳಿಕೆ ಒಂದಕ್ಕೆ ನಾಲ್ಕಾಗುತ್ತ ಬಂತು. ಆಗ ಮೈಯೆಲ್ಲ ರೋಗ ತುಂಬಿಕೊಂಡು, ಗಂಡ ಮನೆಗೆ ಹಿಂದಿರುಗಿ ಬಂದ ; ಮೂರು ಹೊತ್ತೂ ಹಾಸಿಗೆಯ ಮೇಲೇ ಬಿದ್ದಿರುತ್ತಿದ್ದ. ಅವನ ಔಷಧ ಪಥ್ಯಕ್ಕೆ ಧಾರಾಳವಾಗಿ ಖರ್ಚು ಮಾಡುತ್ತಿದ್ದಳು.

ಆ ಮುಟ್ಠಾಳ ಗಂಡನಿಗೂ ಕೆಟ್ಟಮೇಲೆ ಬುದ್ಧಿ ಬಂದಿತು; ಹೆಂಡತಿಯ ನಿಯತ್ತು, ಹೆಣ್ಣಿಗೆ ಹೆಣ್ಣು ಗಂಡಿಗೆ ಗಂಡಾಗಿ ದುಡಿಯುವ ಶಕ್ತಿ ಕಂಡು ತುಂಬ ಮೆಚ್ಚಿಗೆ ಯಾಯಿತು. 'ನಾನಂತೂ ನಿನಗೆ ಅನ್ಯಾಯಮಾಡಿದೆ. ಸಂಪಾದ್ನೆ ಮಾಡಿದ್ದನ್ನೆಲ್ಲಾ ಯಾವೋಳಿಗೋ ತೆತ್ತೆ. ಪ್ರಾಯದ ಸೊಕ್ಕಿನಲ್ಲಿ ಮನೆಯ ದೀಪ ಮಂಕಾಗಿ ಕಾಣ್ತು ನನಗೆ. ನೀನು ಕಷ್ಟಪಟ್ಟು ಸಂಪಾದ್ನೆ ಮಾಡಿರೋದನ್ನೆಲ್ಲಾ ಸಾಯೋ ಬಡ್ಡಿಮಗ ನನಗ್ಯಾಕೆ ಖರ್ಚುಮಾಡಿ ಹಾಳುಮಾಡ್ತಿ, ಒಡವೆಮಾಡ್ಸಿ ಹಾಕಿಕೋ, ಮಗಳಿಗೂ ಒಂದೆರಡು ಮಾಡ್ಸಿಕೊಡು, ನಿಮ್ಮನ್ನ ನೋಡಾದರೂ ಸಂತೋಷಪಡ್ತೀನಿ' ಎಂದು ದಿನಕ್ಕೆ ಮೂರು ಸಲ ಅಂಗಲಾಚಿ ಕೇಳಿಕೊಳ್ಳ ತೊಡಗಿದ. ಗಂಡ ಸಾಯುತ್ತಾನೆಂದು ಅವಳಿಗೂ ಗೊತ್ತು. ಅಷ್ಟು ಹೊತ್ತಿಗೆ ಮಗಳು ರಾಮಕ್ಕನೂ ಗಂಡನ ಕೂಡ ಜಗಳ ಆಡಿಕೊಂಡು ತವರು ಮನೆಗೆ ಹಿಂದಿರುಗಿದಳು, ತನ್ನ ಐದು ವರ್ಷದ ಹೆಣ್ಣು ಕೂಸಿನೊಂದಿಗೆ. ಗಂಡನ ಕಡೆ ಗಾಲದ ಬಯಕೆ ಎಂದು, 'ಅವನ ತೃಪ್ತ್ಯರ್ಥವಾಗಿ, ಹನುಮಕ್ಕ ತಾನೂ ಒಂದೆರಡು ಒಡವೆ ಮಾಡಿಸಿಕೊಂಡಳು, ಗಂಡನನ್ನು ಬಿಟ್ಟುಬಂದ ದುಃಖದಲ್ಲಿದ್ದ ಮಗಳಿಗೂ ಒಂದೆರಡು ಮಾಡಿಸಿಹಾಕಿದಳು. ಪಾಪ, ಅವಳ ದುರದೃಷ್ಟ, ಗಂಡನೂ ತೀರಿಹೋದ ; ಒಂದೆರಡು ತಿಂಗಳಲ್ಲೇ ಅಳಿಯನೂ ತೀರಿಹೋದ. ಮನೆಗೆ ಹಿಂದಿರುಗಿದ ಮಗಳು ಮನೆಯಲ್ಲೇ ಕೂರುವಂತಾಯಿತು. ನಾನು ಮನೆಗೆ ಕಾಲಿಟ್ಟ ಗಳಿಗೆ ಚೆನ್ನಾಗಿಲ್ಲ ಎಂದು ರಾಮಕ್ಕನೂ ಕುದ್ದುಕೊಳ್ಳತೊಡಗಿ ದಳು. ಮಗಳಿಗೂ ಸಮಾಧಾನ ಹೇಳಿಕೊಂಡು ಕಾಲ ನೂಕಬೇಕಾಯಿತು. ನೆಲೆ ತಪ್ಪಿದ್ದ ಎರಡು ಹೆಣ್ಣು ಜೀವಗಳು ಮಾನವಾಗಿ ನೆಮ್ಮದಿಯಿಂದ ಬದುಕಿ, ಇನ್ನೊಂದು ಅರಿಯದ ಹೆಣ್ಣಿಗೆ ನೆಲೆ ಕಲ್ಪಿಸಬೇಕಾದರೆ ಒಂದಕ್ಕೆ ಹತ್ತರಷ್ಟು ಗಳಿಸಬೇಕು, ಯಾರ ಹಂಗಿಗೂ ಒಳಗಾಗಬಾರದು ಎಂಬ ಗುಟ್ಟನ್ನ ಹನುಮಕ್ಕ ಸ್ವಾನುಭವದಿಂದ ಅರಿತುಕೊಂಡಿದ್ದಳು. ಗಂಡ ಅಳಿಯ ತೀರಿಕೊಂಡ ಮೇಲೆ ಅವಳು ಇಮ್ಮಡಿಯ ಹುರುಪಿನಿಂದ ದುಡಿಯತೊಡಗಿದಳು. ಗಂಡ ಸಾಯುವು ದಕ್ಕೆ ಮುಂಚೆ ಅವಳು ಮಾಡಿಸಿಕೊಂಡ ಒಡವೆಗಳ ಜೊತೆಗೆ, ಬೇರೆ ರೀತಿಯಲ್ಲೂ ಒಡವೆ ಕೂಡುತ್ತ ಬಂದುವು. ದುಡ್ಡಿನ ದರದಿದ್ದ ಎಷ್ಟೋ ಜನ ಒಡವೆಗಳನ್ನು ಅಡವಿಟ್ಟು ವಾಯಿದೆ ಮೀರಿ ಎಷ್ಟು ದಿನವಾದರೂ ಬಿಡಿಸಿಕೊಳ್ಳುತ್ತಲೇ ಇರಲಿಲ್ಲ. ವಾಯಿದೆ ಮೀರಿದರೂ ಚಿಂತೆಯಿಲ್ಲ, ಹಣ ತಂದುಕೊಟ್ಟುಬಿಟ್ಟರೆ ಸಾಕು, ಬಡ್ಡಿ ಯನ್ನೂ ಬಿಟ್ಟುಕೊಡುತ್ತೇನೆ, ಅವರ ಒಡವೆ ಅವರು ತೆಗೆದುಕೊಂಡು ಹೋಗಲಿ ಎನ್ನುತ್ತಿದ್ದಳು. ಹೆರರ ಒಡವೆ ಕಾಪಾಡುವ ಹೊಣೆ ಅವಳ ಪಾಲಿಗೆ ಬಿದ್ದಿತ್ತು.

'ಶೆಟ್ಟೆಪ್ಪನ ಅಂಗಡಿಯಲ್ಲಿರುವಂಥ ಕಬ್ಬಿಣದ ಪೆಟ್ಟಿಗೆ ಒಂದು ಕೊಂಡುಕೋ' ಅಂತ ನಾನೇ ಹೇಳಿದೆ. 'ಅದಕ್ಕೆ ಯಾಕೆ ನೂರಾರು ರೂಪಾಯಿ ಸುರಿಯಬೇಕು? ಒಡವೆಗಳೆಲ್ಲ ನಮ್ಮ ಮೈಮೇಲೇ ಇರಲಿ. ಅದು ಯಾವ ಗಂಡು ನಮ್ಮನ್ನ ಮುಟ್ಟೋ ಧೈರ್ಯ ಮಾಡುತ್ತಾನೆ ನೋಡಿಬಿಡ್ತೇನೆ' ಎಂದು ಬೆಲೆ ಬಾಳುವ ಒಡವೆಗಳಲ್ಲಿ ಕೆಲವನ್ನ ತಾನು ಹಾಕಿಕೊಳ್ಳುತ್ತಿದ್ದಾಳೆ, ಕೆಲವನ್ನ ಮಗಳಿಗೂ ಮೊಮ್ಮಗಳಿಗೂ ಕೊಟ್ಟಿದ್ದಾಳೆ. ಒಂದು ದಿನ ನಾನೇ ಹನುಮಕ್ಕನನ್ನ ಮೆಲ್ಲನೆ ಆಕ್ಷೇಪಿಸಿದೆ: 'ನಿಮ್ಮ ಜನದಲ್ಲಿ ನಮ್ಮ ಜನದಹಾಗೆ ಗಂಡ ಸತ್ತ ಹೆಂಗಸರು ವಿಕಾರ ಮಾಡಿಕೊಳ್ಳೋದಿಲ್ಲ. ಕೆಲವರು ಒಂದೆರಡು ಒಡವೇನೂ ಹಾಕಿಕೊಂಡಿರುತ್ತಾರೆ. ಆದರೆ, ಹೀಗೆ, ಮೈಮೇಲೆ ಒಡವೆ ಹೇರಿಕೊಂಡರೆ ಜನ ಆಡಿಕೊಂಡಾರು' ಎಂದೆ. ಅದಕ್ಕೆ, 'ಒಡವೆ ಎಲ್ಲ ಕಳವಾದರೆ ಅವನ್ನ ಕೊಟ್ಟೋರಿಗೆ ಏನು ಉತ್ತರ ಹೇಳಲಿ? ಕಳವಾದವು ಎಂದರೆ ನಂಬಾರಾ? ದಕ್ಕಿಹಾಕಿಕೊಳ್ಳೋದಕ್ಕೆ ಆಟ ಹೂಡಿದಾಳೆ ಅಂತಾರೆ. ಮೈತುಂಬ ಒಡವೆ ಹಾಕ್ಕೊಂಡ್ರೆ, ಗಂಡನ್ನ ತಿಂದ್ಕೊಂಡ ಮುಂಡೆ ಮಿಂಡಂದ್ರು ಕೊಟ್ಟ ಒಡವೆ ಹಾಕ್ಕೊಂಡು ಮೆರೀತಾಳೆ ಅಂತ ತಾನೆ ಅಂತಾರೆ ಜನ? ಅಂದುಕೊಳ್ಳಲಿ. ಹಾಗೆ ಅನ್ನೋ ಜನ ಒಡವೆ ಹೋದರೆ ತೆಗೆದುಕೊಟ್ಟಾರೋ? ಇಲ್ಲ. ಇನ್ನು ಜನಕ್ಕೆ ಯಾಕೆ ಹೆದರಬೇಕು? ನಮ್ಮ ಮನಸ್ಸು ಸುದ್ಧವಾಗಿದ್ರೆ ಸರಿ' ಅಂತ ಅಂದಳು. ನಾನು ಬಲ್ಲಮಟ್ಟಿಗೆ ಹನುಮಕ್ಕನ ಒಡವೆಗಳ ಗುಟ್ಟು ಇದು."

ಗುಂಡಪ್ಪ ಹೇಳಿದ್ದನ್ನು ಸುಬ್ಬಣ್ಣನವರು ಬಡಪೆಟ್ಟಿಗೆ ನಂಬಲೇ ಇಲ್ಲವಂತೆ. ಅವರ ಅಭಿಪ್ರಾಯದಲ್ಲಿ, ಗುಂಡಪ್ಪ ಹನುಮಕ್ಕನ ಯಾವುದೋ ದಾಕ್ಷಿಣ್ಯಕ್ಕೆ ಒಳಗಾಗಿ ಕಥೆ ಕಟ್ಟಿ ಹೇಳುತ್ತಿದ್ದ. "ಕೈನೋಡಿ ಹೇಳುವಹಾಗೆ ಮುಖ ನೋಡಿಯೇ ಹೇಳುವುದಕ್ಕಾಗುವುದಿಲ್ಲವೆ, ಜೋಯಿಸರೆ, ಒಬ್ಬರ ನಡತೆಯನ್ನ?" ಎಂದು ಸುಬ್ಬಣ್ಣ ಜಗಲಿ ಜೋಯಿಸರನ್ನು ಪ್ರಶ್ನಿಸಿದರಂತೆ. "ಹನುಮಕ್ಕನ ಮುಖ ನೋಡುವಹಾಗೆ ನಿಮ್ಮಿಬ್ಬರ ಮುಖವನ್ನೂ ನೋಡ್ತಾ ಇದೇನೆ. ಬೀದಿಯ ಎಲ್ಲರ ಮುಖವನ್ನೂ ನೋಡಿದೇನೆ, ನಿತ್ಯ ನೋಡ್ತಾ ಇದೇನೆ. ಮುಖ ನೋಡಿ ಒಬ್ಬರ ಹಿಂದು ಮುಂದು ಹೇಳುವುದಕ್ಕೆ ಹೊರಟರೆ ಆಮೇಲೆ ಕಷ್ಟಕ್ಕೆ ಬಂದೀತು! ದೇವರ ದಯದಿಂದ, ನನಗೆ ಆ ಶಕ್ತಿ ಇಲ್ಲ" ಎಂದರಂತೆ, ಜೋಯಿಸರು. ಅಲ್ಲಿಗೆ ಆ ಮಾತುಕತೆ ನಿಂತಿತಂತೆ.

ಹನುಮಕ್ಕ ಒಡವೆಗಳನ್ನು ಗಿರವಿ ಇಟ್ಟುಕೊಳ್ಳುತ್ತಿದ್ದ ಸಂಗತಿಯನ್ನು ನಮ್ಮ ತಂದೆಯೂ ಬಲ್ಲರು. ದೊಡ್ಡ ಸಂಸಾರದ ಖರ್ಚನ್ನು ತೂಗಿಸಿಕೊಂಡು

ಹೋಗಲು ನಮ್ಮ ತಂದೆ ಹಲವರಿಂದ ಹಲವು ಬಗೆಗಳಲ್ಲಿ ಸಾಲ ಎತ್ತದೆ ವಿಧಿಯಿರಲಿಲ್ಲ. ತಾವೇ ಒಂದೆರಡು ಒಡವೆಗಳನ್ನು ಹನುಮಕ್ಕನಿಗೆ ಅಡವಾಗಿ ಕೊಟ್ಟು, ತುಂಬ ಬೆಳೆದು ಬಂದಿದ್ದ ಹಾಲಿನ ಬಾಕಿಯನ್ನು ಒಂದು ಸಲ ತೀರಿಸಿದ್ದರು. ಆದ್ದರಿಂದ ಅವರು ಗುಂಡಪ್ಪ ಹನುಮಕ್ಕನ ವಿಚಾರವಾಗಿ ಹೇಳಿದ್ದನ್ನು ನಂಬಿದರು. ಆದರೂ ಸುಬ್ಬಣ್ಣನ ದೂರು ಗುಂಡಪ್ಪನ ಮನಸ್ಸನ್ನು ಕೊರೆಯುತ್ತಲೇ ಇತ್ತು. ಆ ಪ್ರಕರಣ ನಡೆದ ನೂರು ನಾಲ್ಕು ವರ್ಷದ ಮೇಲೆ ಗುಂಡಪ್ಪನೂ ತೀರಿಹೋದ. ಆಗ, ಸಾಯುವುದಕ್ಕೆ ಏಳೆಂಟು ದಿನ ಮುಂಚೆ, ಗುಂಡಪ್ಪ ನಮ್ಮ ತಾಯಿಯಮೇಲೆ ಆಣೆಯಿಟ್ಟು (ನಮ್ಮ ತಾಯಿಯಲ್ಲಿ ಗುಂಡಪ್ಪನಿಗೆ ತುಂಬ ಭಕ್ತಿ)–"....ವೆಂಕಟರಮಣಯ್ಯ, ಹನುಮಕ್ಕನ ವಿಚಾರ ನಾನು ಅಂದು ಹೇಳಿದ್ದನ್ನು ನೀನು ನಂಬಿದರೆ ನಂಬು ಬಿಟ್ಟರೆ ಬಿಡು. ನನಗೆ ಕಾಣುತ್ತಿದ್ದುದು ಹಾಗೆ. ನಾನು ಮೋಸ ಹೋಗಿರಬಹುದು. ಆದರೆ, ಸಾವಿತ್ರಮ್ಮನ ಆಣೆಗೂ ಹೇಳ್ತೇನೆ, ನನ್ನ ಬ್ರಹ್ಮಚರ್ಯವನ್ನು ನೀನು ಶಂಕಿಸಬೇಡ"–ಎಂದು ನಮ್ಮ ತಂದೆಗೆ ಗೋಪ್ಯವಾಗಿ ಹೇಳಿ, ನಂಬಿಕೆಯ ಪ್ರಮಾಣ ತೆಗೆದುಕೊಂಡು, ನೆಮ್ಮದಿಯಾಗಿ ಕಣ್ಣುಮುಚ್ಚಿದನಂತೆ.

ಗುಂಡಪ್ಪ ಸತ್ತದ್ದು, ಆಗ ದೇಶವನ್ನೆಲ್ಲ ಆಹುತಿ ತೆಗೆದುಕೊಳ್ಳುತ್ತಿದ್ದ ಇನ್‌ಫ್ಲೂಎನ್‌ಜಾ ಜ್ವರದಲ್ಲಿ. ಆಗ ಪ್ರತಿಯೊಂದು ಮನೆಯೂ ಮಸಣ. ಒಬ್ಬರಿಗೊಬ್ಬರು ಅನುತಾಪ ಹೇಳುವ ಪರಿಸ್ಥಿತಿಯೇ ಇರಲಿಲ್ಲ. ಹನುಮಕ್ಕ ಮಾತ್ರ ಪ್ರತಿನಿತ್ಯ ಎಲ್ಲರ ಮನೆಯಲ್ಲೂ ಹಾಜರು. ಪ್ರತಿಯೊಬ್ಬರಿಗೂ ಸಮಾಧಾನ ಹೇಳುವವಳೂ ಅವಳೇ. ಆಗ ಸುಬ್ಬಣ್ಣನವರೇ ಹೇಳುತ್ತಿದ್ದರು : "ಹನುಮಕ್ಕ, ಈಗ ನೀನು ನಮ್ಮ ಬೀದಿಯವರಿಗೆಲ್ಲ ಹಾಲು ಕೊಡುವುದಿಲ್ಲ ಅಂದುಬಿಟ್ಟರೆ ನಮ್ಮ ಗತಿ ಏನು ? ಮುನಿಸಿಪಾಲಿಟಿಯವರು ಹುಯ್ಯುತ್ತಿರುವ ಗಂಜಿ ಯಾವ ಮೂಲೆಗೂ ಸಾಲದು. ನಾವು ಕೊಡಬೇಕಾದ ಬಾಕಿ ತುಂಬ ಇದ್ದರೂ, ನೀನು ನಮಗೆ ಹಾಲು ಹಾಕುತ್ತಿದ್ದೀಯೆ. ಈ ಮುದುಕ ನಿನ್ನನ್ನು ತುಂಬ ಗೋಳುಹುಯ್ದುಕೊಂಡಿದ್ದಾನೆ. ಅದನ್ನೆಲ್ಲಾ ನೀನು ಮನಸ್ಸಿಗೆ ಹಚ್ಚಿಕೊಂಡಿಲ್ಲ. ದೇವರು ನಿನಗೆ ಒಳ್ಳೆಯದು ಮಾಡಲಿ." ಇದಕ್ಕೆ ಹನುಮಕ್ಕ ಕೊಡುತ್ತಿದ್ದ ಉತ್ತರ–ಹಾಲಿನಂಥ ಮುಗುಳ್ನಗೆ.

ಗುಂಡಪ್ಪ ಸತ್ತಾಗ ಅವನಿಗಾಗಿ ನಮ್ಮ ಮನೆಗೆ ಬಂದು ಕಂಬನಿ ಸುರಿಸಿದ ನಮ್ಮ ಬೀದಿಯವರೆಂದರೆ–ಸುಬ್ಬಣ್ಣ ಮತ್ತು ಹನುಮಕ್ಕ ; ವಾಸ್ತವವಾಗಿ ಹನುಮಕ್ಕ ನಮ್ಮ ಬೀದಿಯವಳಲ್ಲದಿದ್ದರೂ, ನಮ್ಮ ಬೀದಿಯವರಲ್ಲಿ ಒಬ್ಬಳಾಗಿಬಿಟ್ಟಿದ್ದಳು. ಮೊದಲೆಲ್ಲಾ, ಎಲ್ಲರೂ ಅವಳನ್ನು ನಿತ್ಯ ಬೈದು ಶಪಿಸಿ ನೆನೆಯು

ತ್ತಿದ್ದರು ; ಇನ್‌ಫ್ಲೂಎನ್‌ಜಾ ಖಾಯಿಲೆ ಬಂದು ಹೋದಮೇಲೆ ಎಲ್ಲರೂ ಅವಳನ್ನು ಹೊಗಳುವವರೇ ಆದರು. ಕಾರಣ ಅನೇಕ ಜನ ಕೊಡಬೇಕಾಗಿದ್ದ ಹಳೆಯ ಬಾಕಿಗಳನ್ನು ಅವಳು ಬಿಟ್ಟುಬಿಟ್ಟಿದ್ದಳು. ಹಾಗೆ ಉಪಕಾರ ಹೊಂದಿದ್ದವರಲ್ಲಿ ಸುಬ್ಬಣ್ಣನವರೂ ಒಬ್ಬರು. ಅವಳನ್ನು ಹೊಗಳುವಾಗಲೂ ಅವರು ತಮ್ಮ ಕೊಂಗಿತನ ಮಾತ್ರ ಬಿಟ್ಟರಲಿಲ್ಲ : "ನಾವು ಕೊಡಬೇಕಾದ್ದು ನೀರಿನ ಬಾಕಿಯೇ ಆದರೂ ಕೊಡಬೇಕಾದ್ದಂತೂ ಉಂಟಲ್ಲ. ಅದನ್ನು ಬಿಟ್ಟು ಬಿಡುವುದಕ್ಕೂ ದೊಡ್ಡ ಗುಣ ಬೇಕು."

ಇನ್‌ಫ್ಲೂಎನ್‌ಜಾ ಜ್ವರದ ಕಾಲದಲ್ಲಿ ಹನುಮಕ್ಕನ ಸ್ವರೂಪದಲ್ಲಿ ಒಂದು ಮುಖ್ಯ ಮಾರ್ಪಾಟು ಎಲ್ಲರ ಗಮನಕ್ಕೂ ಬಂದಿತ್ತು : ಅವಳು ಹೆಚ್ಚಿನ ಒಡವೆಗಳನ್ನೆಲ್ಲಾ ತೆಗೆದಿಟ್ಟುಬಿಟ್ಟು, ಸಾಧಾರಣ ವೇಷದಲ್ಲಿ ಬರುತ್ತಿದ್ದಳು; "ಯಾಕೆ ಹನುಮಕ್ಕ, ನಾನು ಎಂದೋ ಹಾಸ್ಯ ಮಾಡಿದ್ದೆ ಅಂತ ಒಡವೆಗಳನ್ನ ಕಳಚಿಬಿಟ್ಟೆಯಾ ?" ಎಂದು ಸುಬ್ಬಣ್ಣನವರು ಅಂತಃಕರಣಪೂರ್ವಕವಾಗಿಯೇ ಪ್ರಶ್ನಿಸಿದ್ದರು. ಅದಕ್ಕೆ ಹನುಮಕ್ಕ–"ಊರೆಲ್ಲಾ ಸಾವಿನ ದವಡೆಯಲ್ಲಿ ಸಿಕ್ಕು ಸಂಕಟಪಡ್ತಾ ಇರಬೇಕಾದ್ರೆ, ನಾನು ಒಡವೆ ವಸ್ತ್ರ ತೊಟ್ಟು ಮೆರೆದರೆ ಚೆಂದಾ ಗಿದ್ದೀತಾ ?" ಎಂದಿದ್ದಳು.

ಆ ಕಾಲದಲ್ಲಿ, ಎಲ್ಲರೂ ಒಂದು ಬಗೆಯ ವಿಪತ್ತಿಗೊಳಗಾದರೆ, ಹನುಮಕ್ಕ ಇನ್ನೊಂದು ಬಗೆಯ ವಿಪತ್ತಿಗೊಳಗಾದಳು. ಇದ್ದಕ್ಕಿದ್ದ ಹಾಗೆ ಅವಳ ಮನೆಯಲ್ಲಿ ಎರಡು ಮೂರು ರಾಸುಗಳು ಒಂದು ತಿಂಗಳಲ್ಲೇ ಸತ್ತು ಹೋದುವು. ಮೊಮ್ಮಗಳನ್ನು ಕೊಟ್ಟು ಮದುವೆ ಮಾಡಬೇಕು ಎಂದು ಹತ್ತಿರದ ನಂಟನ ತಬ್ಬಲಿ ಹುಡುಗನೊಬ್ಬನನ್ನು ಹನುಮಕ್ಕ ಮನೆಯಲ್ಲಿ ಕರೆದು ತಂದಿಟ್ಟುಕೊಂಡಿದ್ದಳು. ಅವನು ಹನುಮಕ್ಕ ತೆಗೆದಿರಿಸಿದ್ದ ಒಡವೆಗಳನ್ನೆಲ್ಲಾ ಕದ್ದುಕೊಂಡು ಹೇಳದೆ ಕೇಳದೆ ಓಡಿಹೋದ. ಅವುಗಳಲ್ಲಿ ಕೆಲವು ಅನ್ಯರ ಒಡವೆ ಎಂಬುದೇ ಹನುಮಕ್ಕನ ದುಃಖ. ಪೋಲೀಸಿಗೆ ಕೊಟ್ಟ ದೂರು ಫಲಕಾರಿ ಯಾಗಲಿಲ್ಲ.

ಇದಿಷ್ಟು ನನ್ನ ಬಾಲ್ಯದ ಅನುಭವದಿಂದ ಕಡೆದು ತೆಗೆದ ನೆನಪಿನ ನವನೀತ.

ನನ್ನ ಹುಟ್ಟೂರಾದ ಮೈಸೂರನ್ನು ಬಿಟ್ಟು ಬಂದು ಹಲವು ವರ್ಷ ಗಳಾದವು. ಆದರೂ ಕಾರ್ಯಾರ್ಥವಾಗಿ ಮೈಸೂರಿಗೆ ಹೋಗಿಬರುವುದು ಇದ್ದೇ ಇರುತ್ತದೆ. ಈ ಹಲವು ವರ್ಷಗಳ ಅಂತರದಲ್ಲಿ ಮೈಸೂರಿನ ನಮ್ಮ ಬೀದಿಯ ಸ್ವರೂಪದಲ್ಲಿ, ಜನದಲ್ಲಿ, ಅವರ ನಡವಳಿಯಲ್ಲಿ ಎಷ್ಟೋ ಮಾರ್ಪಾಟುಗಳಾಗಿವೆ.

ಹಾಲುಕೊಳ್ಳುವ ವ್ಯವಹಾರದಲ್ಲೂ ಮಾರ್ಪಾಟಾಗಿದೆ. ಹಿಂದೆ ನಮ್ಮ ಬೀದಿಗೆಲ್ಲಾ ಗುತ್ತಿಗೆ ಹಿಡಿದಂತೆ ಹಾಲು ಹಾಕುತ್ತಿದ್ದವಳು ಹನುಮಕ್ಕ ಒಬ್ಬಳೇ. ಈಗ ನಾಲ್ಕಾರು ಮಂದಿ ಹಾಲು ಹಾಕುತ್ತಿದ್ದಾರೆ; ಕೆಲವರು ಮನೆಯ ಮುಂದೆ ಹಸು ಕರಸಿಕೊಳ್ಳುತ್ತಾರೆ; ಸಮೀಪದಲ್ಲೇ ಒಂದು ಹಾಲಿನ 'ಡೈರಿ' ಆಗಿದೆ. ನಮ್ಮ ಬೀದಿಯ ಚರಿತ್ರೆಯ ಪುಟದಲ್ಲಿ ಹನುಮಕ್ಕನ ಹೆಸರು ಪೂರ್ತಿ ಅಳಿಸಿ ಹೋಗಿದೆ ; ಆದರೆ, ನನ್ನ ನೆನಪಿನಿಂದ ಅಳಿಸಿಲ್ಲ.

ಕೆಲವು ವರ್ಷಗಳ ಹಿಂದೆ ನಾನು ಮೈಸೂರಿಗೆ ಹೋಗಿದ್ದಾಗ, ಹನುಮಕ್ಕನ ಮನೆ ಇದ್ದ ಸಣ್ಣ ಅಡ್ಡ ಬೀದಿಯಲ್ಲಿ (ಅದನ್ನು ಹನುಮಕ್ಕನ ಗಲ್ಲಿ ಎಂದೆ ಜನ ಕರೆಯುತ್ತಿದ್ದರು) ಹಾದು ಹೋಗಬೇಕಾಯಿತು. ಆಗ ಹನುಮಕ್ಕನ ನೆನಪಾಗಿ, ಹಿಂದೆ ಪರಿಚಿತವಾಗಿದ್ದ ಅವಳ ಸಣ್ಣ ಮನೆ ಎಲ್ಲಿ ಎಂದು ಅತ್ತ ಇತ್ತ ಹುಡುಕುನೋಟ ಎಸೆದು ತಿರುಗಿನೋಡಿದೆ. ಆ ಮನೆ ಇದ್ದ ಎಡೆ ನನಗೆ ಚೆನ್ನಾಗಿ ನೆನಪಿತ್ತು ; ಆದರೆ ಈಗ ಆ ಎಡೆಯಲ್ಲಿ ಒಂದು ಸುಂದರವಾದ 'ರಾಮ ಮಂದಿರ' ಕಂಡಬಂದಿತು. ಅದರ ಮುಂಗಡೆ ನಿರಾಭರಣೆಯೂ ಶುಭ್ರಶ್ವೇತ ವಸ್ತ್ರಧಾರಿಣಿಯೂ ಆದ ವೃದ್ಧೆಯೊಬ್ಬಳು ಮೌನವಾಗಿ, ಶಾಂತಳಾಗಿ ಕುಳಿತಿದ್ದಳು ; ಶಬರಿಯ ನೆನಪಾಯಿತು. ನನಗೆ ಹನುಮಕ್ಕನ ವಿಚಾರ ತಿಳಿಸಬಲ್ಲ ನಮ್ಮ ಬೀದಿಯ ವೃದ್ಧರಂತೂ ಎಲ್ಲ ತೀರಿಕೊಂಡಿದ್ದರು ; ಹನುಮಕ್ಕನ ಬೀದಿಯವಳೇ ಆದ ಈ ವೃದ್ಧೆಯನ್ನು ಕೇಳಿದರೆ ಅವಳ ವಿಚಾರ ತಿಳಿಯಬಹುದೆಂದೆಣಿಸಿ, 'ಇದು ಹನುಮಕ್ಕನ ಮನೆ ಆಗಿತ್ತಲ್ಲವೆ ? ಅವಳೆಲ್ಲಿ ಈಗ ?' ಎಂದು ಗಟ್ಟಿಯಾಗಿಯೇ ಪ್ರಶ್ನಿಸಿದೆ. "ನೀನು ಯಾರಪ್ಪ ?" ಎಂದು ಆ ವೃದ್ಧೆ ಪ್ರಶ್ನಿಸಿದಳು. ನನ್ನ ಪರಿಚಯ ಹೇಳಿದ ಮೇಲೆ, "ರಾಮಪ್ಪನಾ ! ನಮ್ಮ ರಾಮಪ್ಪ ! ಈಟೊಂದು ಪ್ರೀತಿಯಿಂದ ವಿಚಾರಿಸಿಕೊಂಡು ಬರಬೇಕಾದ್ರೆ ನಮ್ಮ ರಾಮಪ್ನಲ್ಲದೆ ಇನ್ನು ಯಾರು ! ಒಳಕ್ಕೆ ಬಾ, ರಾಮುನ ಸೇವೆ ಆಗಲಿ" ಎಂದು ತಾನೂ ಒಳಕ್ಕೆ ಹೋದಳು. ನಾನು ದೊಡ್ಡದಾದ ರಾಮದೇವರ ಪಟದ ಮುಂದೆ ಭಕ್ತಿಭಾವದಿಂದ ಕುಳಿತಿದ್ದೆ. ಆ ವೃದ್ಧೆ ನನ್ನ ಮುಂದೆ ಒಂದು ದೊಡ್ಡ ಬೆಳ್ಳಿಯ ಲೋಟದ ತುಂಬ ಹಾಲು ತಂದಿಟ್ಟು, "ಆಗಲಿ, ರಾಮುನ ಸೇವೆ" ಎಂದಳು. ನಾನು ಸಂತೋಷಪಡುತ್ತಿರಲು, 'ನೆಪ್ಪಾಗಲಿಲ್ಲವಾ ?' ಎಂದಳು. ಅವಳೇ ಹನುಮಕ್ಕ ಎಂದು ಗುರುತಿಸಲು ನನಗೆ ಬಹಳ ಹೊತ್ತು ಹಿಡಿಯಲಿಲ್ಲ. ರಾಮಭಕ್ತೆ ತುಂಬೊಲವಿನಿಂದ ನೀಡಿದ ಹಾಲನ್ನು 'ರಾಮು' ಸ್ವೀಕರಿಸದೆ ಗತ್ಯಂತರವಿರಲಿಲ್ಲ !

ವೃದ್ಧೆ ಹನುಮಕ್ಕನಿಂದಲೇ ತಿಳಿಯಬಂತು, ಅವಳ ಆ ಹಿಂದಿನ ಕಥೆ: ಮೊಮ್ಮಗಳಿಗೆ ಬೇರೆಯ ಗಂಡನ್ನು ಗೊತ್ತುಮಾಡಿ, ಅದ್ದೂರಿಯಿಂದ ಮದುವೆ

ಮಾಡಿ, ಅವಳಿಗೆ ಒಡವೆ ವಸ್ತುಗಳನ್ನು ಕೊಟ್ಟಿದ್ದಳು ; ತನ್ನ ಕಣ್ಣು ಮುಂದೆಯೆ ಮಗಳು ತೀರಿಹೋದದ್ದು ಅವಳಿಗೆ ತುಂಬ ವ್ಯಥೆಯನ್ನುಂಟುಮಾಡಿತ್ತು : ಹಾಲಿನ ವ್ಯಾಪಾರ, ಲೇವಾದೇವಿ ಎಲ್ಲವನ್ನೂ ಬಿಟ್ಟುಬಿಟ್ಟು, ತಾನು ಸಂಪಾದಿಸಿದ್ದ ಧನವನ್ನೆಲ್ಲಾ ವ್ಯಯಮಾಡಿ ಆ ರಾಮಮಂದಿರವನ್ನು ಕಟ್ಟಿಸಿದ್ದಳು. ಅಲ್ಲಿ ಅವಳ ಏರ್ಪಾಟಿನಂತೆ ನಡೆಯುತ್ತಿದ್ದ ಶನಿವಾರದ ಭಜನೆ, ಹರಿಕಥೆಗಳೇ ಅವಳ ಬಾಳಿನ ಉಸಿರಾಗಿದ್ದುವು.

"....ನೋಡಿದ್ಯಾ ರಾಮಪ್ಪ, ಹಿಂಗೈತೆ ನನ್ನ ಕತೆ. ಈಗ ನಂಗೆ ಯಾವ ಯೋಚನೆಯೂ ಇಲ್ಲ. ಯಾರ ಹಂಗೂ ಇಲ್ಲ. ಆದರೆ ಹುಟ್ಟುಚಾಳಿ ಎಲ್ಲಿಗೆ ಹೋದೀತು? ಒಂದು ಹಸ ಕಟ್ಟಿವಿನಿ. ಅದರ ಹಾಲು ಕರೆದು, ನಮ್ಮಪ್ಪನ ಮುಂದಿಟ್ಟು, ಹೊಟ್ಟೆ ತುಂಬ ಕುಡೀತೀನಪ್ಪ ; ನಿಮ್ಮಂತೋರು ಯಾರಾದರೂ ಬಂದರೆ, ಅವರಿಗೂ ಉಳಿದಿರ್‍ತದೆ, ಪರಸಾದ....ಸೀತವ್ವ ಕೊಡೋ ಹಾಲು ಹಾಲಲ್ಲ, ಅಮ್ರುತ. ಆದ್ರೆ, ನಂಗನ್ನಸ್ತದೆ, ಈ ಅಮ್ರುತಕ್ಕಿಂತ, ನಮ್ಮಪ್ಪನ ಎರಡಕ್ಸರ ಐತಲ್ಲ, ಅದು ಇನ್ನೂ ದಿವಿನಾದ ಅಮ್ರುತ, ಅಲ್ವಾ ?"

ಅವಳ ಪ್ರಶ್ನೆಗೆ ಭಕ್ತಿಭಾವದಿಂದ ತಲೆದೂಗಿದೆ ; ತಲೆಬಾಗಿದೆ.

# ಕೊಟ್ಟಣದ ನೀಲಮ್ಮ

ಗ್ರಾಮೋದ್ಯೋಗ ಗೃಹಕೈಗಾರಿಕೆ ಮುಂತಾದವು ಪುನರುದ್ಧಾರವಾಗುತ್ತಿರುವ ಈ ಕಾಲದಲ್ಲಿ ಅವಕ್ಕೆ ಬೆಲೆ ಕೊಡುವ ನಾನು ಕೆಲವು ಕಾಲದ ಹಿಂದೆ ಮನೆಗೆ ಕೊಟ್ಟಣದ ಅಕ್ಕಿಯನ್ನು ತರಿಸಿದೆ. ಈ ಕಾಲದ ಬೆಡಗಿನ ಯುವತಿಯರ ಪಕ್ಕದಲ್ಲಿ ಆ ಕಾಲದ ಸಹಜ ಸೌಂದರ್ಯ ಪ್ರತಿಮೆಯಂತಿದ್ದ ಕೊಟ್ಟಣದ ನೀಲಮ್ಮನನ್ನು ತಂದು ನಿಲ್ಲಿಸಿದರೆ ಅವಳನ್ನು ಇಂದಿನವರು ಹೇಗೆ ಮೆಚ್ಚಲಾರರೋ ಹಾಗೆಯೇ 'ಮಿಲ್ಲಿನಲ್ಲಿ ಪಾಲಿಷ್' ಆದ ಅಕ್ಕಿಯ ಅನ್ನವನ್ನು ಭುಂಜಿಸುವ ಇಂದಿನವರಿಗೆ ಕೊಟ್ಟಣದ ಅಕ್ಕಿಯ ಅನ್ನವೂ ಸೊಗಸದು. ಅಲ್ಲದೆ, ಭೂಗುಣವನ್ನನುಸರಿಸಿ ಬತ್ತದ ಸತ್ತ್ವವೂ ಕಡಮೆಯಾಗಿದೆ ; ಕೊಟ್ಟಣದ ಮುಖ್ಯ ಸಲಕರಣೆಯಾಗಿದ್ದ ಯಾತವೇ ಕಣ್ಮರೆಯಾಗಿದೆ. ಇಂದು ಹಳ್ಳಿಯ ಮಕ್ಕಳು ಕೂಡ ಯಾತ ಎಂದರೆ ಏನು ಎಂದು ಕೇಳಿಯಾರು ? ಇರಲಿ. ನಮ್ಮ ಮನೆ ಮಕ್ಕಳು ಕೊಟ್ಟಣದ ಅಕ್ಕಿಯ ಅನ್ನವನ್ನು ಮೋಹಿಸದೆ ಮುಖ ಸಿಂಡರಿಸಿಕೊಂಡಾಗ, ಅದರ ಆರೋಗ್ಯಕರ ಗುಣವನ್ನು ವಿವರಿಸುತ್ತ, ಒಂದಾನೊಂದು ಕಾಲದಲ್ಲಿ, ಮೈಸೂರಿನಲ್ಲಿ, ನಮಗೆ ಬತ್ತ ಬರುತ್ತಿದ್ದಿತೆಂದೂ ಅದನ್ನು ಕೊಟ್ಟಣಕ್ಕೆ ಹಾಕಿಸಿ ಕೊಟ್ಟಣದ ಅಕ್ಕಿಯನ್ನೇ ಊಟ ಮಾಡುತ್ತಿದ್ದರೆಂದೂ ನಮ್ಮ ಮನೆಯ ಬತ್ತವನ್ನು ನೀಲಮ್ಮನಿಗೆ ಕೊಟ್ಟಣಕ್ಕೆ ಹಾಕುತ್ತಿದ್ದೆವೆಂದೂ ತಿಳಿಸಿದೆನು. ಯಾತ ಎಂದರೆ ಏನು, ಕೊಟ್ಟಣ ಎಂದರೆ ಏನು ಎಂಬ ಪ್ರಶ್ನೆಗಳೇನೋ ಬಂದುವು ಮಕ್ಕಳಿಂದ. ನೀಲಮ್ಮ ಯಾರು ಎಂದು ಮಾತ್ರ ಯಾರೂ ಕೇಳಲಿಲ್ಲ. ಕೇಳದಿದ್ದರೂ, ನನ್ನ ನೆನಪೇನೋ ಮೂವತ್ತು ವರ್ಷಗಳ ಮಹಾಕಾಲಶರಧಿಯನ್ನು ದಾಟಿಹೋಗಿ, ಬಾಲ್ಯ ಯೌವನಗಳ ದಡದಲ್ಲಿ ವಿಶ್ರಮಿಸಿತು. ಇರುಳು ಮಲಗಿದಾಗ, ನೆನಪಿನ ನೆರವುಪಡೆದ ಮನಸ್ಸು ಗತಕಾಲದ ಕೆಲವು ಹಾಳೆಗಳನ್ನು ತಿರುವಿಹಾಕಿತು.

೦ ೦ ೦ ೦ ೦

ಮೊತ್ತಮೊದಲು ನಮ್ಮ ಮನೆಯವರಿಗೆ, ವಿಶೇಷವಾಗಿ ನನಗೆ, ನೀಲಮ್ಮನ

ಆತ್ಮೀಯ ಪರಿಚಯವಾದದ್ದು ನಮ್ಮ ಮನೆಯಲ್ಲೆ ; ನಾನು ಚಿಕ್ಕ ಹುಡುಗ ನಾಗಿದ್ದಂದು ನಮ್ಮ ತಂದೆಗೆ ಅರಕಲಗೂಡಿನಲ್ಲಿ ಪಿತ್ರಾರ್ಜಿತವಾದ ಎರಡುಮೂರು ಎಕರೆ ಗದ್ದೆ ಇದ್ದವು. ಆರು ತಿಂಗಳಿಗೆ ಆಗುವಷ್ಟು ಬತ್ತ ಬರುತ್ತಿತ್ತು. ಬತ್ತವನ್ನು ಶೇಖರಿಸುವುದಕ್ಕಾಗಿಯೇ ಮನೆಯಲ್ಲಿ ಒಂದು ಕಣಜವನ್ನು ಕಟ್ಟಿ ಸಿತ್ತು. ಅದು ಬತ್ತದ ಕಣಜ ಎಂಬುದಷ್ಟನ್ನು ನಾನು ಗಮನಿಸಿದ್ದೆನೇ ಹೊರತು, ಅಲ್ಲಿನ ಬತ್ತ ಅದು ಹೇಗೆ ಅಕ್ಕಿಯಾಗಿ ಮಾರ್ಪಡುತ್ತದೆ ಎಂಬ ಮಹಾರಹಸ್ಯ ನನ್ನ ಪಾಲಿಗೆ ರಹಸ್ಯವಾಗಿಯೇ ಉಳಿದಿತ್ತು. "ಗುಂಡಪ್ಪ, ಅಕ್ಕಿ ಮುಗಿದು ಹೋಗಿದೆಯಂತೆ, ಕೊಟ್ಟಣದ ಮನೆಗೆ ಹೋಗಿ ಬೀರಪ್ಪನನ್ನ ಬರಹೇಳಿ ಬತ್ತ ತೆಗೆದುಕೊಂಡುಹೋಗುವ ಹಾಗೆ ಹೇಳಿ ಬರುತ್ತೀಯಾ ?"–"ಇದೇನು, ಬೀರಪ್ಪ, ಈಸಲ ನಮ್ಮ ಬತ್ತದ ಅಕ್ಕಿ ಕೊಟ್ಟಹಾಗೆ ಕಾಣುವುದಿಲ್ಲವಲ್ಲ ? ಯಾವುದೋ ಆನೆಗೆ ಹಾಕುವ ಅಕ್ಕಿ ಕೊಟ್ಟಹಾಗೆ ಕಾಣುತ್ತೆ !"–"ಏನು ಏನು ! ಬತ್ತವನ್ನ ಇವನ ಮನೆಗೆ ನಾವೇ ಹೊತ್ತುಕೊಂಡು ಹೋಗಬೇಕೆ ! ಎಲ ಎಲಾ ಇವನ ದುರಹಂಕಾರವೇ !"–"ಅಗ್ರಹಾರಕ್ಕೆಲ್ಲಾ ಈ ಬೀರಪ್ಪ ಒಬ್ಬನಾಗಿ ಹೆಚ್ಚಿಕೊಂಡು ಬಿಟ್ಟದಾನೆ. ನಮ್ಮ ಬೀದಿಗೇ ಒಬ್ಬರು ಯಾತದವರು ಬಂದರೆ ಚೆನ್ನಾ ಗಿದ್ದೀತು"—ಇತ್ಯಾದಿ ಇತ್ಯಾದಿ ಮಾತುಗಳು ಮಾತ್ರ ನನ್ನ ಕಿವಿಹೊಗು ತ್ತಿದ್ದುವು.

ಒಂದು ದಿನ ಇದ್ದಕ್ಕಿದ್ದಹಾಗೆ ನಮ್ಮ ಗುಮಾಸ್ತೆ ಗುಂಡಪ್ಪ ಒಬ್ಬಳು ತುಂಬುಹರೆಯದ ಹೆಂಗಸನ್ನು ನಮ್ಮ ಮನೆಗೆ ಕರೆತಂದು, ನಮ್ಮ ತಂದೆಯೊಂದಿಗೆ ಹೇಳಿದ :

"ಇನ್ನು ಮುಂದೆ ಇವಳೇ ನಮ್ಮ ಮನೆಯ ಅನ್ನಪೂರ್ಣೆ. ಅಡ್ಡಗಲ್ಲಿ ಪಕ್ಕದ ಮೂಲೇಮನೆ ಇದೆಯಲ್ಲಾ, ಅಲ್ಲಿಗೆ ಬಾಡಿಗ್ಗೆ ಬಂದಿದ್ದಾನೆ ಇವಳ ಗಂಡ. ಅರಮನೆ ಶಾಮರಾಯರು ಈ ಸಂಸಾರವನ್ನು ಈ ಬೀದಿಗೆ ಬರುವಹಾಗೆ ಮೆಹನತ್ತುಮಾಡಿದರಂತೆ, ಸುಬ್ಬಣ್ಣ ಹೇಳಿದರು. ಅದರಲ್ಲಿ ಸ್ವಾರ್ಥವೂ ಇದೆ ಅಂತ ಇಟ್ಟುಕೋ, ವೆಂಕಟರಮಣಯ್ಯ."

"ಅಂದರೇ ನೀನು ಹೇಳುವುದು...." ಎಂದು ನಮ್ಮ ತಂದೆ, ನಮ್ಮ ತಾಯಿಯ ಮತ್ತು ನನ್ನ ಮುಖ ನೋಡಿ ರಾಗ ಎಳೆದರು.

"ಅಂಥಾದ್ದೇನಿಲ್ಲ...." ಎಂದು ಗುಂಡಪ್ಪ ನೀಲಮ್ಮನ ಬಗೆಗೆ ಅರಮನೆ ಶಾಮರಾಯರಿಂದ ತಾನು ಕೇಳಿದ್ದ ಸಂಗತಿಯನ್ನು ಕಥಿಸಿದ :

ಅರಮನೆ ಶಾಮರಾಯರು 'ಟೂರಿಂಗ್' (ಪ್ರವಾಸಿ) ನಾಟಕ ಕಂಪೆನಿ ಯೊಂದರಲ್ಲಿ ರಾಜಾಪಾರ್ಟು ಮಾಡುತ್ತಿದ್ದರು. ಆ ಕಂಪೆನಿಯ ಮುಖ್ಯ

ಪಾತ್ರಧಾರಿಗಳೆಲ್ಲ 'ಬಾಡಿಗೆ ನಟರು.' ಕಂಪೆನಿಯ ಮಾಲಿಕ ಅಂಥ ನಟರಿಗೆ ಒಂದು ನಾಟಕದಲ್ಲಿ ಪಾರ್ಟು ಮಾಡಿದ್ದಕ್ಕೆ ಇಷ್ಟು ರೂಪಾಯಿ, ದಿನಭತ್ಯ ಇಷ್ಟು, ಪ್ರಯಾಣದ ಖರ್ಚು ಇಷ್ಟು ಎಂದು ಪಾವತಿ ಮಾಡಿಬಿಡುತ್ತಿದ್ದ. ನಟನನ್ನು 'ಸಾಕಿಕೊಳ್ಳುವುದ'ಕ್ಕಿಂತ ಈ ಏರ್ಪಾಟು ಲಾಭದಾಯಕವಾಗಿತ್ತು ಆತನಿಗೆ. ಶಾಮರಾಯರು ಅಂತಹ ನಟರು. ಮಳವಳ್ಳಿ ಕಮಲಮ್ಮ ಎಂಬವಳು ಅಂತಹ ಇನ್ನೊಬ್ಬಳು ನಟಿ; ರಾಣಿಪಾರ್ಟು ಮಾಡುತ್ತಿದ್ದವಳು. ಆಗಿನ ಕಾಲದಲ್ಲಿ ಸ್ತ್ರೀಯರು ನಾಟಕಗಳಲ್ಲಿ ಅಷ್ಟಾಗಿ ಪಾತ್ರವಹಿಸುತ್ತಿರಲಿಲ್ಲ ಎಂದೇ ಹೇಳಬಹುದು. ಈ ಟೂರಿಂಗ್ ಕಂಪೆನಿಯಲ್ಲಿ ಉತ್ತಮ ಅಭಿನಯಕ್ಕಿಂತ ಈ ರಾಣೀಪಾರ್ಟೀ ಬಹು ಮುಖ್ಯ ಆಕರ್ಷಣೆಯಾಗಿತ್ತು. ಒಮ್ಮೆ ಈ ಕಂಪೆನಿ ಸಂಜನಗೂಡಿನಲ್ಲಿ 'ಕ್ಯಾಂಪ್' (ಬಿಡಾರ) ಮಾಡಿದ್ದಾಗ, ಏನೋ ಕಾರಣದಿಂದ ಹೊರಗಿನಿಂದ ಬರ ಬೇಕಾಗಿದ್ದ ಕಮಲಮ್ಮ 'ಚಕ್ಕರ್' ಕೊಟ್ಟುಬಿಟ್ಟಳು. ಮಾಲಿಕನಿಗೆ ತುಂಬ ನಷ್ಟವಾಗಿ, 'ಕಂಪೆನಿಯಲ್ಲಿ ರಾಣಿ ಪಾರ್ಟು ಮಾಡೋಳನ್ನು ಖಾಯಮ್ಮಾಗಿ ಮಡಗಿಕೊಂಡುಬಿಡಬೇಕು' ಎಂದು ಯಾರೋ ಒಬ್ಬ ಖಯಾಲಿನಟ ಮಾಲಿಕನ ಕಿವಿಗೆ ಮಂತ್ರ ಊದಿಬಿಟ್ಟ. ಸರಿ, ದುರ್ಮಂತ್ರ ಬಿತ್ತಿದ ಶಕುನಿಗಳು ಇದ್ದೆಡೆ ಯಲ್ಲೆಲ್ಲಾ ಅದನ್ನು ನಡಸುವ ದುಶ್ಶಾಸನರೂ ಇದ್ದೇ ಇರುತ್ತಾರೆ. ಯಾರೋ ಹೇಗೋ ಅನ್ವೇಷಣೆ ಮಾಡಿ, ಮೂರನೆಯ ದಿನವೇ ಮಾಲಿಕನ ಮುಂದೆ ತುಂಬುಹರೆಯದ ಚೆಲುವೆಯೊಬ್ಬಳನ್ನು ತಂದು ನಿಲ್ಲಿಸಿದರು. ಜಿಂಕೆ ಯಂತೆ ಬೆರಗುಗಣ್ಣು ಬಿಟ್ಟು ಅವಳು ಮುಂದೆ ನಿಂತಿದ್ದಳಂತೆ. ಅವಳೇ ನೀಲಮ್ಮ. ಜೊತೆಯಲ್ಲಿ ಅವಳ ಗಂಡನೂ, ಅತ್ತೆಯೂ ಇದ್ದರು. ಅವಳು ನಟಿಯಾಗಿ ಕಂಪೆನಿ ಸೇರಲು ಅವರು ಸಮ್ಮತಿಕೊಟ್ಟಿದ್ದರಂತೆ. ಅವಳಿಗೆ ಕೊಡುವ ಸಂಬಳವನ್ನು ಅವರ ಕೈಗೆ ಹಾಕಬೇಕೆಂಬುದೊಂದೇ ಕರಾರು. ನೀಲಮ್ಮನ ಸೌಂದರ್ಯವನ್ನೇನೋ ಮಾಲಿಕ ಮೆಚ್ಚಿಕೊಂಡ. ಆದರೆ, ಅವಳ ಸಾಮರ್ಥ್ಯ ಪರೀಕ್ಷೆಯಾಗಬೇಕಲ್ಲ? ಆ ಗುರುತರವಾದ ಹೊಣೆಗಾರಿಕೆ ಶಾಮರಾಯರ ಹೆಗಲೇರಿತು. ಪರೀಕ್ಷೆಯಾಗಬೇಕಾದ ಸಂದರ್ಭ. ನೀಲಮ್ಮನನ್ನು ಮುಂದು ಮಾಡಿಕೊಂಡು ಅವಳ ಅತ್ತೆ ಗಂಡ ಉತ್ಸುಕರಾಗಿ ನಿಂತಿದ್ದಾರೆ. ಆದರೆ ನೀಲಮ್ಮನ ಮುಖದಲ್ಲಿ ಆ ಔತ್ಸುಕ್ಯವಿಲ್ಲ. ಆಗಂತುಕರ ಅನಿರೀಕ್ಷಿತ ಸಂದರ್ಶನದ ಉದ್ದೇಶ ತಮ್ಮ 'ಕಂಪೆನಿ ಪ್ರೊಪ್ರೈಟ'ರಿಂದ ತಿಳಿದಮೇಲೆ, ಶಾಮರಾಯರು ಏನನ್ನೂ ಹೇಳದೆ ಮೌನರಾಗಿದ್ದರು. ನೀಲಮ್ಮನ 'ಶಾಕುಂತಲ'–ಸೌಂದರ್ಯ ವೇನೋ ಅವರನ್ನು ಮುಗ್ಧಗೊಳಿಸಿತ್ತು. ಆದರೆ, ಅವಳ ಕಣ್ಣಿನ ಕೊನೆಗಳಲ್ಲಿ

ತೊಟ್ಟಿಕ್ಕದೆ ಫಳಫಳಫಳಿಸುತ್ತಿದ್ದ ಹನಿಮುತ್ತುಗಳಲ್ಲಿ ಅವಳ ಹೃದಯ ಹೇಳಿ ಕೊಳ್ಳಲು ಹಾತೊರೆಯುತ್ತಿದ್ದ ದುಃಖದ ಕತೆ ಯಾವದೋ ದುಮದುಮಿಸುತ್ತಿರುವಂತೆ ಅವರಿಗೆ ಭಾಸವಾಯಿತು. 'ಈ ನಾಟಕದ ಕಂಪೆನಿಗೆ ಸೇರಿಸಿಕೊಂಡು ಅವಳನ್ನು ನಾಯಿಪಾಲು ಮಾಡುವುದಕ್ಕಿಂತ ಅರಮನೆಗೆ ಅವ್ವೆಯಾಗಿ ಸೇರಿಸುವುದು ಮರ್ಯಾದೆಯ ಕೆಲಸ' ಎಂದು ತೋರಿತು ಶಾಮರಾಯರಿಗೆ. ಆಕೆಯ ಹೆಸರನ್ನು ತಿಳಿದುಕೊಂಡರು ಮೊದಲು; ನೀಲಮ್ಮನನ್ನು ಪರೀಕ್ಷಿಸಬೇಕಾದರೆ ಕೋಣೆಯಲ್ಲಿ ಯಾರೂ ಇರಕೂಡದೆಂದು ಆಜ್ಞಾಪಿಸಿದರು. ಬಳಿಕ ನೀಲಮ್ಮನ ಅತ್ತೆ ಗಂಡ ಯಾವ ಆಕ್ಷೇಪಣೆಯನ್ನೂ ಎತ್ತದೆ ಆಚೆಗೆ ತೊಲಗಿದರು. ಅಚ್ಚರಿಯಿಂದ ಅರಳಿದ್ದ ಕಂಪೆನಿಯ ಒಡೆಯನ ಕಣ್ಣುಗಳಲ್ಲಿ ಅಸೂಯೆ ಅವಿತುಕೊಂಡಿದ್ದುದು ಶಾಮರಾಯರ ಗಮನಕ್ಕೆ ಬಂತು. "ನಾನು ಇದ್ದರೆ ಬಾಧಕವಿಲ್ಲವಲ್ಲ...." ಎಂದು ಉಗುಳು ನುಂಗಿ ನುಡಿದ ಕಂಪೆನಿಯ ಮಾಲಿಕ. "ಹಾಗಾದರೆ ನೀವೇ ಪರೀಕ್ಷೆಮಾಡಿಕೊಳ್ಳಿ ಮಲ್ಲಪ್ಪನವರೇ, ನಾನು ಹೊರಟುಹೋಗುತ್ತೇನೆ" ಎಂದು ಶಾಮರಾಯರು ತಮ್ಮ ರಾಜಾ ಮೀಸೆಯನ್ನು ತಿರುವಿದರಂತೆ. ಮಲ್ಲಪ್ಪನವರು ಮರುಮಾತಾಡದೆ ಕೋಣೆಯಿಂದ ಹೊರಕ್ಕಡಿಯಿಟ್ಟರು.

ಶಾಮರಾಯರ ಮೊದಲ ಮರುಕದ ಮಾತುಗಳು ಅವರಲ್ಲಿ ವಿಶ್ವಾಸ ಹುಟ್ಟಿಸಿದವು ನೀಲಮ್ಮನಿಗೆ. ಅವಳು ತನ್ನ ದುಃಖದ ಕತೆಯನ್ನು ತೋಡಿಕೊಂಡಳು : ನೀಲಮ್ಮ ತಾಯಿಯಿಲ್ಲದ ತಬ್ಬಲಿ; ತಿರುಮಕೂಡಲು ನರಸೀಪುರದ ಬಳಿ ಒಂದು ಹಳ್ಳಿ ಅವಳ ತವರೂರು. ಅವಳ ಗಂಡ ನಂಜಪ್ಪ ಭೂಮಿಕಾಣಿ ಉಳ್ಳವನು ಎಂದು ಮೋಸಹೋಗಿ ಅವಳ ತಂದೆ ಅವಳನ್ನು ಆ ಮಧ್ಯವಯಸ್ಕನಿಗೆ ಬಲಿಕೊಟ್ಟದ್ದರಂತೆ. ಆತನಿಗೆ ನಿಜವಾಗಿ ಆಸ್ತಿಯೇನೋ ಇದ್ದಿತಂತೆ ; ಮಧ್ಯವಯಸ್ಸು ಸಮೀಪಿಸುವವರೆಗೂ ಅವನು ತನ್ನ ಆ ಪಿತ್ರಾರ್ಜಿತ ಆಸ್ತಿಯನ್ನು ಭೋಗವಿಲಾಸ ಸಾಧನೆಯಲ್ಲಿ ದುರ್ವ್ಯಯಮಾಡಿದ್ದನಂತೆ. ಅವಳ ಅತ್ತೆಯೂ ಗಂಡ ತೀರಿದಮೇಲೆ ದುರ್ನಡತೆಗೆ ಇಳಿದಿದ್ದಳಂತೆ. ಅನೇಕ ವರ್ಷಕಾಲ, ಮಗನ ವ್ಯಯ ತಾಯಿಯ ಆದಾಯ—ಒಂದೇ ತಳಿಗೆಯಲ್ಲಿ ಎಂಜಲೂಟಮಾಡಿದಂತೆ ಸಾಗುತ್ತಿದ್ದುವು. ನೀಲಮ್ಮ ಗಂಡನ ಮನೆಗೆ ಬರುವವೇಳೆಗೆ ಅವಳ ಅತ್ತೆಯ ಆದಾಯ ನಿಂತುಹೋಗಿತ್ತು–ಹೂವಿನ ಮಕರಂದವೆಲ್ಲ ಬರಿದಾಗಿ, ಅದು ಬಾಡಿಹೋಗಿತ್ತು ; ನಂಜಪ್ಪನ ಕೈ ಬರಿದಾಗಿತ್ತು ; ಮೈ ರೋಗದ ತವರಾಗಿ, ದುರ್ಬಲವಾಗಿ, ಸೋಮಾರಿತನಕ್ಕೆ ಒಕ್ಕಲುಕೊಟ್ಟಿತ್ತು. ಈ ಪರಿಸ್ಥಿತಿಯಲ್ಲಿ, ತಾಯಿ ಮಗ ಇಬ್ಬರೂ ದುರಾಲೋಚನೆಮಾಡಿ ನೀಲಮ್ಮನ ಹೆಣ್ಣುತನವನ್ನು ಮಾರಲು ಹವಣಿಸಿದ್ದರು. ಆದರೆ ನೀಲಮ್ಮ ಸಗ್ಗಿರಲಿಲ್ಲ. ತನ್ನ ಹುಟ್ಟೂರಿ

ನಲ್ಲಿ ತನ್ನ ಅಣ್ಣ ಇದ್ದ ಒಂದು ಮಠಕ್ಕೆ ತನ್ನನ್ನೂ ಕಳಿಸಿಬಿಡಿ ಎಂದು ಬೇಡಿ ಕೊಳ್ಳುತ್ತಿದ್ದಳಂತೆ. ನಾಟಕದ ಕಂಪೆನಿಯಲ್ಲಿ ಹುದ್ದೆ ಎಂದಾಗ ನೀಲಮ್ಮನೂ ಅರೆಮನಸ್ಸಿನಿಂದ ಒಪ್ಪಿದ್ದಳು. ಏಕೆಂದರೆ, ಅವಳಿಗೂ ಒಂದು ಹೊಟ್ಟೆ ಇತ್ತು ! ಒಂದು ಹೊತ್ತಾದರೂ ಬೇಕಾಗಿತ್ತು ಅದಕ್ಕೆ ಒಂದು ತುತ್ತು. ತಕ್ಕ ಶಿಕ್ಷಣ ಕೊಟ್ಟರೆ ನೀಲಮ್ಮ ಉತ್ತಮ ನಟಿಯಾಗಬಹುದೆಂದು ಶಾಮರಾಯರಿಗೆ ನಂಬಿಕೆ ಹುಟ್ಟಿತಾದರೂ, ಹಲವು ಹದ್ದುಗಳೂ ಹೆಗ್ಗಿಡುಗನೂ ಇದ್ದ ಈ ನಾಟಕದ ಕಂಪೆನಿಯಲ್ಲಿ ಈ ಹೆಣ್ಣುಪಾರಿವಾಳ ಸುಖವಾಗಿ ಬದುಕೀತೆಂದು ಅವರಿಗೆ ನಂಬಿಕೆ ಯಾಗಲಿಲ್ಲ. 'ಪರವಾಯಿಲ್ಲ, ಇರಲಿ ನೋಡೋಣ' ಎಂದು ಮಲ್ಲಪ್ಪನಿಗೆ ಒಂದು ತೇಲು ಉತ್ತರಕೊಟ್ಟು, 'ನೀಲಮ್ಮನಿಗೆ ಅರಮನೆಯಲ್ಲಿ ಅವ್ವೆಯ ಕೆಲಸ ಕೊಡಿಸುತ್ತೇನೆ. ನೀವೂ ನೆಮ್ಮದಿಯಾಗಿರಬಹುದು' ಎಂದು ಶಾಮ ರಾಯರು ರಹಸ್ಯವಾಗಿ ನಂಜಪ್ಪನಿಗೂ ಅವನ ತಾಯಿಗೂ ತಿಳಿಸಿದರು. ಮೊದಲೆ ನೀರೂರುತ್ತಿದ್ದ ಅವರ ಬಾಯಿಗೆ ಕಲ್ಲುಸಕ್ಕರೆ ಕೊಟ್ಟಂತಾಯಿತು ; ಅವರು ಮರು ಮಾತಿಲ್ಲದೆ ಒಪ್ಪಿಕೊಂಡರು. ರಾಣಿ ಪಾರ್ಟಿನವಳು 'ಚಕ್ಕರ್' ಕೊಟ್ಟಿದ್ದ ಕಾರಣ, 'ರಾಜ'ಶಾಮರಾಯರಿಗೂ ಹೇಗೂ ಕೆಲಸ ಇರಲಿಲ್ಲ. ಅಂದಿನ ರಾತ್ರಿಯೇ ಅವರು ನಂಜಪ್ಪನ ಸಂಸಾರವನ್ನು ಮೈಸೂರಿಗೆ ಕರೆದುಕೊಂಡುಬಂದು, ತಮಗೆ ಪರಿಚಯವಿದ್ದ ಲಿಂಗಾಯತರ ಮನೆಯೊಂದರಲ್ಲಿ ಅವರಿಗೆ ಎಡೆ ಕಲ್ಪಿಸಿಕೊಟ್ಟರು.

ನಮ್ಮ ಪೂರ್ವಿಕರೆಲ್ಲಾ ಮೈಸೂರು ಅರಮನೆಯ ಸೇವೆಯಲ್ಲಿ ಮೈ ಬೆಳಸಿದ್ದಕ್ಕಿಂತ ಹೆಚ್ಚಾಗಿ ಮೈ ಸವೆಸಿದ್ದವರು. ನಮ್ಮ ತಂದೆ ಮಾತ್ರ ಒಂದು ಕಾಲನ್ನು ಅಲ್ಲಿಂದ ಕಿತ್ತು ಹೊರಕ್ಕೆ ಇಡಬೇಕಾಗಿ ಬಂದಿತ್ತು. ಆದರೂ, ಅವರ ಮಾತಿಗೆ ಅರಮನೆಯ ಅಧಿಕಾರಿ ವರ್ಗದಲ್ಲಿ ಒಂದು ಬೆಲೆಯಿತ್ತು. ಇದನ್ನು ಅರಿತಿದ್ದ ಶಾಮರಾಯರು ನಮ್ಮ ತಂದೆಯ ಮೂಲಕ ನೀಲಮ್ಮನನ್ನು ಅರಮನೆಯ ಅಂತಃಪುರದಲ್ಲಿ ದಾಸಿಯನ್ನಾಗಿ ಕೆಲಸಕ್ಕೆ ಸೇರಿಸಲು ಪ್ರಯತ್ನ ಪಟ್ಟು, ಯಶಸ್ವಿಯಾದರು. ನಮ್ಮ ಬೀದಿಯಲ್ಲೇ ಒಂದೂವರೆ ಅಂಕಣದ ಸಣ್ಣ ಮನೆಯಲ್ಲಿ ಒಂದು ಲಿಂಗಾಯತರ ಬಡ ಕುಟುಂಬ ಒಕ್ಕಲಿತ್ತು. ಅದೇ, ಗುಂಡಪ್ಪ ಹೇಳಿದ 'ಅಡ್ಡಗಲ್ಲಿ ಪಕ್ಕದ ಮೂಲೇಮನೆ.' ಮನೆಯ ಒಡೆಯರೂ ಲಿಂಗಾಯತರೇ. ಬಾಡಿಗೆದಾರ ತುಂಬ ದಿನಗಳಿಂದ ಬಾಡಿಗೆ ಬಾಕಿ ಇಟ್ಟು ಕೊಂಡು ಸತಾಯಿಸುತ್ತಿದ್ದ. ಈ ಸಂಗತಿ ಶಾಮರಾಯರಿಗೆ ಗೊತ್ತಾಗಿ, ಬಾಡಿಗೆ ದಾರನನ್ನು ಬಿಡಿಸಿ, ತಾವು ತಂದಿಡುವ ಒಕ್ಕಲಿಗೆ ಮನೆಯನ್ನು ಬಾಡಿಗ್ಗೆ ಕೊಡಬೇಕೆಂದು ಶಾಮರಾಯರು ಮಾಲಿಕನಮೇಲೆ ಒತ್ತಾಯ ಹಾಕಿದ್ದರು.

ಅದಕ್ಕೆ ಅವನೂ ಒಪ್ಪಿದ್ದ. ಬಾಡಿಗೆದಾರ ಇನ್ನೂ ಮನೆ ಬಿಟ್ಟಿರಲಿಲ್ಲ. ಅಷ್ಟ ರೊಳಗೆ ನೀಲಮ್ಮ ಇದ್ದಕ್ಕಿದ್ದ ಹಾಗೆಯೇ ಅರಮನೆಯಿಂದ ಕಾಲುಕಿತ್ತು ಬಂದು ಬಿಟ್ಟಳು. ಅವಳ ಗಂಡ ಬಂದು ಶಾಮರಾಯರ ಮನೆಯನ್ನು ನೋಡಿಕೊಂಡು ಹೋಗಿದ್ದ. ಅವನು ಒಂದು ದಿನ ಶಾಮರಾಯರ ಮನೆಗೆ ಬಂದು, "ನೋಡಿ ಬುದ್ದೀ, ನೀವು ಕೊಡಿಸಿದ್ದ ದಿವಿನಾದ ಕೆಲಸ ಬಿಟ್ಬಿಟ್ಟು ಬಂದು ಕುಂತವಳೆ ಮನೇಲಿ, ಮೂದೇವಿ ಹಂಗೆ. ನಮ್ಮವ್ವ ಗೇನಾರಳು, ಮುದುಕಿ. ನಾನು ಗೇಯೋಣ ಅಂದರೆ ನನ್ಗೂ ಕೆಲ್ಸ ಸಿಕ್ಕವೊಲ್ದು. ನೀವಾರ ಒಸಿ ಬಂದು ಹೇಳಿ ಬುದ್ದಿ ಅವಳಿಗೆ, ನಾಳೆಯಿಂದ ಅರಮನೆಗೇನೇ ಕೆಲ್ಸಕ್ಕೆ ಹೋಗ್ಲಿ, ಅಲ್ಲೇ ಯಾರದ್ದಾದರೂ ಕೈಕಾಲು ಕಟ್ಕೊಂಡು" ಎಂದು ವರದಿ ಒಪ್ಪಿಸಿ, ಅವರನ್ನು ಪಂಚಾಯಿತಿಗೆ ಕರೆದುಕೊಂಡುಹೋದ. ಶಾಮರಾಯರು ನೀಲಮ್ಮ ಇದ್ದಲ್ಲಿಗೆ ಹೋಗಿ ವಿಚಾರಣೆ ಮಾಡಿದರು. ನೀಲಮ್ಮ ಸಂಕೋಚವಿಲ್ಲದೆ ಒಂದೇ ವಾಕ್ಯದಲ್ಲಿ ಉತ್ತರ ಕೊಟ್ಟುಬಿಟ್ಟಳು: "ನಾನು ಏನು ಹೇಳಲಿ ಬುದ್ದಿ. ಅರಮನೇಲಿ ಕೆಲಸಮಾಡೋ ಚಾಕರವಾನರು ಅವರಲ್ಲಾ, ಆ ಗಂಡು ಪಡೇ ಕಣ್ಣೆಲ್ಲ ನನ್ನಮೇಲೇನೆ. ನನ್ನ ಮಾನ ಉಳಿಯಾಕಿಲ್ಲ ಅಲ್ಲಿ. ನಾನು ಹತ್ತು ಮನೆ ಕೊಟ್ಟಣಾನಾದರೂ ಕುಟ್ಟಿ ಹೊಟ್ಟೆಹೊರಕೊಂಡೇನೇ ಶಿವಾಯಿ, ಮಾನ ಮಾರಿಕೊಳ್ಳೋಕ್ಕೆ ನಾ ಅಂಥ ಹೀನಕುಲದಲ್ಲಿ ಹುಟ್ಟಿದೋಳಲ್ಲ. ನನಗಲ್ಲ ಬುದ್ದಿ ನೀವು ಬುದ್ಧಿ ಹೇಳಬೇಕಾದ್ದು, ನನ್ನ ಗಂಡನಿಗೆ, ನನ್ನ ಅತ್ತೇಗೆ." ನೀಲಮ್ಮನ ಬಾಯಿಂದ 'ಕೊಟ್ಟಣ' ಎಂಬ ಮಾತು ಬಂದದ್ದು ಕೇಳಿ, ಶಾಮ ರಾಯರಿಗೆ ನೀಲಮ್ಮನ ಜೀವನೋಪಾಯಕ್ಕೆ ಒಂದು ಒಳ್ಳೆಯ ಏರ್ಪಾಡು ಮಾಡುವ ಆಲೋಚನೆ ತಟ್ಟನೆ ಹೊಳೆಯಿತು. "ಕೊಟ್ಟಣ ಕುಟ್ಟಬಲ್ಲೆಯಾ ನೀನು, ನಿಜವಾಗಿ ?" ಎಂದು ಅವಳನ್ನು ಕೇಳಿದರು. "ಅಯ್, ನಾನೇನು ಹುಡುಗಾಟಕ್ಕೆ ಹೇಳಿದೆ ಅಂತ ತಿಳಕೊಂಡ್ರಾ ಬುದ್ದಿ ? ನಮ್ಮ ಹಳ್ಳೀಮನೇಲಿ ಯಾತ ಐತೆ. ನಮ್ಮ ಅಜ್ಜಿ ಕೊಟ್ಟಣ ಕುಟ್ತಿದ್ಲು, ನಮ್ಮ ತಾಯಿ ಕುಟ್ತಿದ್ಲು. ನಾನು ಕುಟ್ಲಾರನಾ ?" ಎಂದು ನೀಲಮ್ಮ ಉತ್ತರಿಸಿದಳು. ನಮ್ಮ ಮನೆಯಲ್ಲೂ ತಮ್ಮ ಮನೆಯಲ್ಲೂ ಬತ್ತ ಕುಟ್ಟಿಸಲು ಪಡುತ್ತಿದ್ದ ಪಾಡು ಶಾಮರಾಯರು ಬಲ್ಲ ವಿಷಯ. ಮುಂದಿನ ಬೀದಿಯಲ್ಲಿ ಬೀರಪ್ಪನ ಕೊಟ್ಟಣದ ಮನೆ ಇದ್ದಿತು. ಅಲ್ಲಿಗೆ ಬತ್ತ ಹೊತ್ತೋ ಹೊರಿಸಿಕೊಂಡುಹೋಗಿಯೋ ಕೊಡಬೇಕಾಗಿದ್ದುದಲ್ಲದೆ, ಕುಟ್ಟಿದ ಅಕ್ಕಿಯನ್ನೂ ನಾವೇ ತರಬೇಕಾಗಿದ್ದಿತು. ಕೆಲವು ವೇಳೆ, ಅಕ್ಕಿಗಳು ಅದಲು ಬದಲು ಆಗುತ್ತಿದ್ದುದೂ ಉಂಟು. ಈ ಪಡುಪಾಟಲಿಂದ ಪಾರಾಗಲು ನಮ್ಮ ಬೀದಿಯಲ್ಲೇ ಒಂದು ಕೊಟ್ಟಣದಮನೆ ಆಗಬೇಕೆಂದು ಬಯಸಿದ್ದವರಲ್ಲಿ

ನಮ್ಮ ಗುಂಡಪ್ಪನೂ ಒಬ್ಬ. ಒಂದೆರಡುವೇಳೆ, ನಮ್ಮ ತಂದೆ ಬೇಡ ಎಂದರೂ ಕೇಳದೆ, ಬತ್ತದ ಮೂಟೆಗಳನ್ನು ಹೊತ್ತೂ ಇದ್ದ. ಶಾಮುರಾಯರ ಆಲೋಚನೆಯೂ ಅದೇ ಆಗಿದ್ದಿತು. ಈಗ, ಆ ಆಲೋಚನೆಯನ್ನು ಕಾರ್ಯಗತ ಮಾಡಲು ಅವಕಾಶ ಸಿಕ್ಕಿತ್ತು. ಆ ಮೂಲೆ ಮನೆಯ ಒಕ್ಕಲನ್ನು ಕೂಡಲೆ ಬಿಡಿಸುವಂತೆ ಮಾಡಿ, ಅಲ್ಲಿಗೆ ನೀಲಮ್ಮ ತನ್ನ ಗಂಡ ಮತ್ತು ಅತ್ತೆಯೊಂದಿಗೆ ಬಾಡಿಗ್ಗೆ ಬರುವಂತೆ ಏರ್ಪಾಡುಮಾಡಿಯೇ ಬಿಟ್ಟರು ಶಾಮುರಾಯರು. ಮೊದಲಿದ್ದ ಬಾಡಿಗೆಯವರನ್ನು ಬಿಡಿಸುವ ಕಾರ್ಯದಲ್ಲಿ ನಾಟಕದ ಸುಬ್ಬಣ್ಣ ಮನೆಯ ಮಾಲಿಕನಿಗೆ ಮಧ್ಯಸ್ಥಿಕೆ ವಹಿಸಿ ನೆರವಾಗಿದ್ದರು.

"....ನೋಡಿದೆಯಾ, ಇದೇ ಶಾಮುರಾಯರ ಸ್ವಾರ್ಥ. ಅದರಿಂದ ನಮಗೂ ಅನುಕೂಲವಾಯಿತು ಸದ್ಯ" ಎಂದು ಗುಮಾಸ್ತೆ ಗುಂಡಪ್ಪ ತನ್ನ ಕಥನವನ್ನು ಮುಗಿಸಿದ್ದ. "ಎಲ್ಲರೂ ಇಂಥ ಸ್ವಾರ್ಥದ ಕಾರ್ಯ ಮಾಡಿದರೆ ಪ್ರಪಂಚ ಉದ್ಧಾರವಾದೀತು" ಎಂದರು ನಮ್ಮ ತಂದೆ.

ಹೀಗೆ ಬಂದಳು ನಮ್ಮ ಬೀದಿಗೆ ನೀಲಮ್ಮ. ಅವಳ ಪ್ರಥಮ ಪರಿಚಯ ನಮ್ಮ ಮನೆಯಲ್ಲೇ ಎಂದು ಮೊದಲೇ ತಿಳಿಸಿರುವೆನಷ್ಟೆ. ಅವಳ ನಡೆ ನುಡಿ ಯಾವುದರಿಂದಲೂ ಅವಳ ಬದುಕು ನಂಜ–ಬಟ್ಟಲಾಗಿದ್ದಿತೆಂದು ಯಾರೂ ಊಹಿಸುವಂತಿರಲಿಲ್ಲ. ಅವಳ ಮನೆಬದುಕಿನ ದುಃಖದ ಸಂಗತಿ ಕ್ರಮ ಕ್ರಮೇಣ ನಮ್ಮ ನೆರೆಹೊರೆಗೆಲ್ಲಾ ಹೊರಪಡುವವರೆಗೆ, ಅದು ಗೊತ್ತಿದ್ದುದು ನಮ್ಮ ಮನೆಯವರು, ಶಾಮುರಾಯರು ಮತ್ತು ಸುಬ್ಬಣ್ಣ–ಇಷ್ಟು ಮಂದಿಗೆ ಮಾತ್ರ. ಆದರೆ, ನಿಜವಾಗಿ, ಯಾವ ಬಗೆಯ ಕೊರಗನ್ನೇ ಆಗಲಿ ನೀಲಮ್ಮ ಹಚ್ಚಿಸಿಕೊಂಡಿದ್ದಂತೆ ಅವಳ ಚರ್ಯೆಯಿಂದ ಲವಲೇಶವಾದರೂ ತೋರಿಬರುತ್ತಿರ ಲಿಲ್ಲ. ನೀಲಮ್ಮನದು ಸದಾ ನಗುಮುಖ. ಆ ನಗುವನ್ನು ನಿಸ್ಸಂಕೋಚ ವಾಗಿ ಧಾರಾಳವಾಗಿ ಬಿಟ್ಟುಕೊಡುತ್ತಿದ್ದ ಹುಟ್ಟು ಕೆಂದುಟಿಗಳು ತುಸು ದಪ್ಪನೆ ಯವೆ ಎನ್ನಬೇಕು–ತೊಂಡೆವಣ್ದುಟಿ ಎನ್ನುತ್ತಾರೆಯಲ್ಲಾ, ಆ ಜಾತಿಗೆ ಸೇರಿದವು. ಅವಳ ಮುಖ ಗುಂಡಾಗಿಲ್ಲದೆ ಹೋಗಿದ್ದರೆ, ಆ ತುಟಿಗಳು ಆ ಮುಖಕ್ಕೆ ಒಪ್ಪು ತ್ತಿರಲಿಲ್ಲ. ಕಣ್ಣುಗಳೂ ಅಷ್ಟೆ : ಗುಂಡು ಮುಖಕ್ಕೆ ತಕ್ಕ ಬೊಗಸೆಗಣ್ಣುಗಳು. ಕೈಗಳ ಬೆಳ್ಳಿಯ ಕಡಗ, ಕಾಲುಗಳ ಬೆಳ್ಳಿಯ ಬಳೆ ಹಾಗೂ ರುಳಿ, ಬೆಳ್ಳಿಯ ಕಾಲುಂಗುರ, ಕೈಗೆ ಕರಿಪಟ್ಟೆಬಳೆ ಹಾಗು ಕೆಂಪು ಚರಕಿಸಾಣೆ ಬಳೆ–ಇವು ಆ ಅವಯುವಗಳ ಗುಂಡನ್ನು ಎತ್ತಿತೋರಿಸುತ್ತಿದ್ದವು. ಕುಪ್ಪಸ, ತುಂಬುಸೆರಗಿನ ಆಚ್ಛಾದನ ಇವು ಯಾವುವೂ ಅವಳ ತುಂಬಿದ ಎದೆಯ ಮಾಟವನ್ನು ಮುಚ್ಚಲು

ಅಸಮರ್ಥವಾಗಿದ್ದುವು ; ಉಪಮೆ ಉತ್ಪ್ರೇಕ್ಷೆ ಮುಂತಾದ ಅಲಂಕಾರಗಳು ಅವುಗಳ ಎದುರು ತಲೆತಗ್ಗಿಸುವಂತಿದ್ದುವು. ಮೈಬಣ್ಣ ಇರುವುದು ಸಾಧಾರಣ ವಾಗಿ ಯಾವುದಾದರೂ ಒಂದು ಡೊಂಕು ಮುಚ್ಚುವುದಕ್ಕೆ ; ನೀಲಮ್ಮನ ವಿಚಾರದಲ್ಲಿ ಮಾತ್ರ, ಅದು ಅವಳ ಚೆಲುವಿಗೆ ಒಪ್ಪವಿಡುವುದಕ್ಕೆ ನೆರವಾಗಿ ದ್ದಿತು. ಎರಡು ಕಿವಿಗಳಲ್ಲೂ ಒಪ್ಪುತ್ತಿದ್ದ ದೊಡ್ಡ ಕೆಂಪಿನೋಲೆಗಳು, ಮೂಗಿನ ದೊಡ್ಡ ನತ್ತು, ಕೊರಳ ಕರಿಮಣಿ ಹವಳಗಳ ಸರ, ಶುಭ್ರಶೀಲದ ಕುರುಹೋ ಎಂಬಂತೆ ಹಣೆಯಲ್ಲಿ ಮೆರೆಯುತ್ತಿದ್ದ ಬಿಳಿಯ ವಿಭೂತಿ, ಅದರ ನಡುವೆ ದೊಡ್ಡ ಅಡ್ಡ ಕುಂಕುಮ–ಇವು ಆ ಚೆಲುವಿಗೆ ಗರತಿಯ ಗಾಂಭೀರ್ಯವನ್ನು ನೀಡಿದ್ದುವು. ನಮ್ಮ ಗುಂಡಪ್ಪ, "ತ್ರಿಣಯನೇಶ್ವರ ಗುಡಿಯ ಅಮ್ಮನವರೇ ನಡೆದು ಬಂದ ಹಾಗಿದಾಳೆ ನಮ್ಮ ನೀಲಮ್ಮ" ಎನ್ನುತ್ತಿದ್ದ ; "ನೀಲಮ್ಮನೆತ್ತ ಅಮ್ಮನವರೆತ್ತ" ಎಂದು ಬಯ್ಯಿಸಿಕೊಂಡಿದ್ದ ಸುಬ್ಬಣ್ಣನವರಿಂದ.

ನೀಲಮ್ಮ ನಮ್ಮ ಬೀದಿಗೆ ಬಂದ ತರುಣದಲ್ಲೇ ಬೀದಿಯಲ್ಲಿ ಬತ್ತ ಬರು ತ್ತಿದ್ದ ನಾಲ್ಕಾರು ಸಂಸಾರಗಳವರು ಅವಳಿಗೇ ಕೊಟ್ಟಣಕ್ಕೆ ಬತ್ತ ಹಾಕತೊಡ ಗಿದರು. ಅವಳನ್ನು ಕಂಡರೆ ಎಲ್ಲರಿಗೂ ಒಂದು ಬಗೆಯ ಮರುಕ. ನಾಟಕದ ಸುಬ್ಬಣ್ಣನವರ ಕುಹಕ ಯಾರನ್ನೂ ಕುಟುಕದೆ ಬಿಟ್ಟದ್ದಿಲ್ಲ. ಅಂಥವರು ಕೂಡ, "ಅಯ್ಯೋ ಪಾಪ, ತಾನು ದುಡಿದು ಗಂಡನನ್ನೂ ಅತ್ತೆಯನ್ನೂ ಸಾಕಬೇಕು. ಅಯೋಗ್ಯರು, ಅಯೋಗ್ಯರು. ಎಂಥ ವಿಚಿತ್ರ !" ಎನ್ನುತ್ತಿದ್ದರು. ನೀಲಮ್ಮ ಬತ್ತ ಬರುವವರ ಮನೆಗೆ ತಾನೇ ಬಂದು ದೊಡ್ಡ ಗೂಡೆಯನ್ನೋ, ಗೋಣಿಯ ಚೀಲವನ್ನೋ ತೆಗೆದುಕೊಂಡು ಹೋಗುವಳು. ಕಣಜದಿಂದಲೋ ಪೆಟ್ಟಿ ಯಿಂದಲೋ ತಾನೇ ಬತ್ತವನ್ನು ಹೊರತೆಗೆದು, ಬಳ್ಳದಲ್ಲಿ ಅಳೆದುಕೊಂಡು, ಅಳೆದು ಮಿಕ್ಕದ್ದನ್ನು ಮತ್ತೆ ಕಣಜಕ್ಕೇ ಸೇರಿಸಿ, ಸುಮಾರು ಐವತ್ತು ಅರುವತ್ತು ಸೇರಿನಷ್ಟು ಬತ್ತವನ್ನು ಹೊತ್ತು ಮನೆಗೆ ಒಯ್ಯುತ್ತಿದ್ದಳು ; ಒಯ್ದ ಬತ್ತಕ್ಕೆ ತಕ್ಕ ಪ್ರಮಾಣದ ಅಕ್ಕಿಯನ್ನು ತಾನೇ ಹೊತ್ತು ತಂದು ಮುಟ್ಟಿಸುತ್ತಿದ್ದಳು. ಇವಳ ಕಾರ್ಯಶ್ರದ್ಧೆ, ಪ್ರಾಮಾಣಿಕತೆ ಇವಕ್ಕೆ ಮಾರುಹೋಗಿ ಆಚೆ ಈಚೆ ಬೀದಿ ಗಳವರು ಕೂಡ ಇವಳಿಗೇ ಬತ್ತ ಹಾಕತೊಡಗಿದರು. ಇದರಿಂದ ಇವಳು ಕೆಲ ಮಟ್ಟಿಗೆ ಬೀರಪ್ಪನ ಕರುಬಿಗೆ ಪಾತ್ರಳಾಗಬೇಕಾಯಿತು.

ಮನೆಯ ಗಂಡಾಳು, ಹೆಣ್ಣಾಳು ಎಲ್ಲ, ನೀಲಮ್ಮನೇ. ನಾನು ಕಂಡಂತೆಯೇ ಅವಳ ಗಂಡ ಮೂರುಹೊತ್ತೂ ಮಣ್ಣಿನ ಚಿಲಿಮೆಗೆ ಒದ್ದೆ ಬಟ್ಟೆ ಸುತ್ತಿಕೊಂಡು ಗಾಂಜಾ ಬೆರಸಿದ ಹೊಗೆಸೊಪ್ಪು ಸೇದುತ್ತ ಜಗಲಿಯಮೇಲೆ ಕುಳಿತಿರುತ್ತಿದ್ದ. ಯಾವ ಉದ್ಯೋಗ ಇಲ್ಲದವನು ಕೂಡ ಏನಾದರೂ ಮಾಡುತ್ತ

ಇರುತ್ತಾನೆ. ನೀಲಮ್ಮನ ಗಂಡ ಏನನ್ನೂ ಮಾಡುತ್ತಿರಲಿಲ್ಲ. ನೀಲಮ್ಮನ ಅತ್ತೆಯಂತೂ ಹೇಳಿಕೇಳಿ ಮುದುಕಿ; ಸದಾ ಬಿಸಿಲು ಕಾಯಿಸುತ್ತ ಕುಳಿತಿರುವಳು; ಮಳೆಗಾಲವಾದರೆ ಮನೆಯೊಳಗೆ ಹುದುಗಿಕೊಂಡಿರುವಳು. ಈ ಇಬ್ಬರಿಗೆ ಯಾವ ವ್ಯಕ್ತಿತ್ವವೂ ಇದ್ದಿರಲಿಲ್ಲವಾಗಿ, ಬೀದಿಯವರೆಲ್ಲ ಇವರನ್ನು 'ನೀಲಮ್ಮನ ಗಂಡ', 'ನೀಲಮ್ಮನ ಅತ್ತೆ' ಎಂದೇ ನಿರ್ದೇಶಿಸುತ್ತಿದ್ದರು. ನೀಲಮ್ಮನ ಗಂಡ ಮೌನಿ. ಅವನ ಮೌನ ಗಾಂಜಾ ಸೇವನೆಯ ಮತ್ತಿನ ರೂಪಾಂತರವಷ್ಟೆ. ಕೆಟ್ಟ ನಡತೆಯಿಂದ ಮೈಕೆಡಿಸಿಕೊಂಡು, ಪತ್ನಿಯಿಂದ ತಿರಸ್ಕೃತನಾಗಿ, ದುಡಿಯಲಾರದ ಆ ದುರ್ಬಲ ಸೋಮಾರಿಗೆ ಭಂಗೀಸೇವನೆ ಏಕೈಕ ಶರಣವಾಗಿದ್ದಿತು. ನೀಲಮ್ಮನ ಅತ್ತೆ ಹಾಗಲ್ಲ. ಹಲ್ಲಿಲ್ಲದ ಅವಳ ತೆರೆದ ಬಾಯಿ ಸದಾ ವಟಗುಟ್ಟುತ್ತಲೇ ಇದ್ದಿತು. ಯಾರನ್ನಾದರೂ ಅವಳು ಬಯ್ಯುತ್ತಲೇ ಇರಬೇಕು. ಅವಳಿಗೆ ತನ್ನ ಸೊಸೆಯಮೇಲೆ ಇನ್ನಿಲ್ಲದ ಅಸೂಯೆ. ಅವಳ ಪರಿಶುದ್ಧ ಶೀಲವನ್ನು ಕಂಡರೆ ಅವಳಿಗೆ ಆಗುತ್ತಿರಲಿಲ್ಲ. ಇದ್ದಕ್ಕಿದ್ದಹಾಗೆ ಕಿರಿಚಿಕೊಂಡುಬಿಡುತ್ತಿದ್ದಳು, ಹುಚ್ಚಿಯಂತೆ: "ನನ್ನ ಸೊಸೆ ಭೋ ಪತಿವ್ರತೆ, ಭೋ ಪತಿವ್ರತೆ! ಗಂಡನ ಕೂಡ ಬದುಕು ಮಾಡದವಳು ಅವಳು ಎಂಥ ಪತಿವ್ರತೆ? ಮುಂದೆ ಗೊತ್ತಾಗುತ್ತೈತೆ ಅವಳಿಗೆ, ಗಂಡನಿಗಾಗ ದೋಳು ಮಿಂಡನ ಪಾಲು ಅಂತ." ಚಿಕ್ಕವರಾಗಿದ್ದ ನಮಗೆ ಈ ಮಾತುಗಳ ಅರ್ಥ ಆಗ ಅಷ್ಟು ಸ್ಫುಟವಾಗಿ ಬೋಧೆಯಾಗುತ್ತಿರಲಿಲ್ಲ.

ನೀಲಮ್ಮ ನಿಜವಾಗಿ ಪತಿವ್ರತೆಯೇ ಎಂದು ನನಗೆ ತೋರುತ್ತದೆ. ವ್ಯಭಿಚಾರಿಯಾಗಿದ್ದ ಪತಿಯನ್ನು ದೂರವಿಟ್ಟ ಮಾತ್ರಕ್ಕೆ ಅವಳನ್ನು ಪತಿವ್ರತೆ ಅಲ್ಲ ಎನ್ನಬಹುದೆ? ನಮ್ಮ ಮನೆಯಲ್ಲಿ ಸರಸವಾಗಿ ಸಾವಿರ ಮಾತಾಡುತ್ತಿದ್ದಳು. ಒಮ್ಮೆಂಯಾದರೂ, ಅಪ್ಪಿತಪ್ಪಿಯಾದರೂ, ಅವಳ ಬಾಯಿಂದ ಪತಿಯನ್ನು ಅತ್ತೆಯನ್ನು ಕುರಿತು ನಿಂದೆಯ ಮಾತುಗಳು ಬರುತ್ತಿರಲಿಲ್ಲ. ಗಂಡನಿಗೆ ಬಡಿಸದೆ ತಾನು ಊಟಮಾಡುತ್ತಿರಲಿಲ್ಲ. ಜಾತಿಯ ಕಟ್ಟಿನ ವಿಚಾರದಲ್ಲಿ ಅವಳದ್ದು ಬಹು ಎಚ್ಚರ. ಹಾಗೆಂದು, ಅದು ಇಂದಿನ ದಿನಗಳಲ್ಲಿ ಕಾಣಿಸಿಕೊಂಡಿರುವ ಸಂಕುಚಿತ ಜಾತಿಭಾವನೆಯಲ್ಲ. ಅಂಥ ಭಾವನೆ ನಮ್ಮ ಬೀದಿಯಲ್ಲಿ ಯಾರಿಗೂ ಇರಲಿಲ್ಲವೆಂದೇ ಹೇಳಬಹುದು. ಒಂದು ಸಲ, **ಅವಳು ಯಾತ ತುಳಿಯುವು** ದನ್ನು ನೋಡಬೇಕೆಂಬ ಕುತೂಹಲವಾಯಿತು ನನಗೆ. (ಅವಳಿದ ಮನೆಯಲ್ಲಿ ಯಾತ ಇರಲಿಲ್ಲ, ಒರಳಿನಲ್ಲಿ ಒನಕೆಯಿಂದಲೇ ಕುಟ್ಟುತ್ತಿದ್ದವಳು. ಬತ್ತಹಾಕುವವರು ಹೆಚ್ಚಿದಮೇಲೆ ಹಿಂಭಾಗದ ನಡಮೆಯಲ್ಲಿ ಒಂದು ಯಾತ ಹಾಕಿಸಿ

ಕೊಂಡಳು.) ಅವಳು ಯಾತ ತುಳಿಯುವುದನ್ನು ನೋಡುತ್ತ ಕುಳ್ಳಿರುವುದೇ ಒಂದು ಸೊಗಸಿನ ನೋಟ. ಒಮ್ಮೆ ನಾನೇ ಸ್ವಲ್ಪ ಬತ್ತ ತೆಗೆದುಕೊಂಡು ಹೋಗಿ ಕೊಡುವ ನೆಪಮಾಡಿಕೊಂಡು, ಅವಳು ಯಾತ ತುಳಿಯುತ್ತಿರುವ ಸಮಯವರಿತೇ ನೇರವಾಗಿ ಒಳಕ್ಕೆ ನುಗ್ಗಿ ನೋಡುತ್ತ ನಿಂತೆ. ನನ್ನ ಕುತೂಹಲ ವೇನೋ ತಣಿಯಿತು. ಕೆಲಹೊತ್ತು ಅವಳಾಗಲಿ, ಒರಳಿನ ಕಡೆ ಕುಟ್ಟಿದ ಬತ್ತ ತೊಳಸುತ್ತ ಕುಳಿತಿದ್ದ ಕೂಲಿಯ ಹುಡುಗಿಯಾಗಲಿ ನನ್ನನ್ನು ಗಮನಿಸಲಿಲ್ಲ. ನೀಲಮ್ಮ ನನ್ನನ್ನು ಕಂಡಕೂಡಲೆ, ತಟ್ಟನೆ ಯಾತ ತುಳಿಯುವುದನ್ನು ನಿಲ್ಲಿಸಿ, "ನಮ್ಮ ಮನೇಗೆ ಬೆಳಕು ಬಂದಂಗಾಯ್ತು, ಬನ್ನಿ, ಕುಂತುಕೊಳ್ಳಿ" ಎಂದು ತೊಟ್ಟಿಯಲ್ಲಿ ಚಾಪೆ ಹಾಸಿ, ಬಲಾತ್ಕಾರಮಾಡಿ ಕೂರಿಸಿದಳು. "ಕಜ್ಜಾಯ ಕೊಡ್ತೀನಿ, ತಿಂದೀರಾ ?" ಎಂದು ನಗುತ್ತ ನನ್ನನ್ನು ಕೇಳಿದಳು. ಅವಳ ಮನಸ್ಸು ನೋಯಿಸಬಾರದೆಂದು, ನಾನು "ಆಗಲಿ" ಎಂದೆ. "ನೀವೇನೋ ಆಗಲಿ ಅಂದಿರಿ. ನಾನು ಕೊಟ್ಟೇನಾ ? ನಾವು ಶಿವಾಚಾರದವರು ಮಾಡಿದ್ದನ್ನ ಬಾಂಬ್ರು ತಿನ್ನಭೋದಾ ಎಲ್ಲಾರ ? ನಿಮ್ಮ ಜಾತಿ ಕೆಡಿಸಿ ನಾನು ಯಾವ ನರಕಕ್ಕೆ ಹೋಗಲಿ ರಾಮಪ್ಪ ?" ಎಂದು ನನ್ನ ಮುಂದೆ ಒಂದು ಲೋಟ ಹಚ್ಚನೆಯ ಹುಸವಿನಹಾಲು ತಂದಿಟ್ಟಳು. ನಾನು ಕುಡಿದೆ ಎಂದು ಬೇರೆ ಹೇಳಬೇಕಾಗಿಲ್ಲವಲ್ಲ. ನಮ್ಮ ತಾಯಿ ಒಂದು ಸಲ (ಅದೇ ಮೊದಲ ಸಲ) ಹಾಲಿನ ಹನುಮಕ್ಕ ಮುಂತಾದವರಿಗೆ ಕೊಡುವಂತೆ ಯಾವುದೋ ಹಬ್ಬದಂದು ಹೋಳಿಗೆಯನ್ನು ನೀಲಮ್ಮನಿಗೆ ಕೊಡಹೋದರು. ಅವಳು ಒಂದೇ ಮಾತಿನಲ್ಲಿ, "ಏನೂ ತಿಳಕೋಬೇಡಿ ತಾಯಿ. ನೀವು ಮಾಡಿದ್ದನ್ನ ನಾವು ತಿನ್ನೋದಿಲ್ಲ. ನಿಮ್ಮ ಜಾತಿ ಕಟ್ಟು ನಿಮಗೆ, ನಮ್ಮ ಜಾತಿ ಕಟ್ಟು ನಮಗೆ. ನನಗೆ ಎಲೆ ಹುಚ್ಚು. ತಿಂಡಿ ಬದಲು ಎರಡೆಲೆ ಒಂದಡಕೆಚೂರು ಕೊಟ್ಬಿಡಿ ಸಾಕು" ಎಂದು ಬಿಟ್ಟಳು. ಹಲಕೆಲವರು 'ನೀಲಮ್ಮನಿಗೆ ಜಾತಿ ಜಂಬ' ಎಂದುಕೊಂಡದ್ದೂ ಉಂಟು. ಆದರೆ ನಮ್ಮ ಮನೆಯವರಿಗೆ ಮಾತ್ರ ನೀಲಮ್ಮನ ವಿಷಯದಲ್ಲಿ ಗೌರವಭಾವನೆ ಹೆಚ್ಚಿತು.

ನೀಲಮ್ಮನ ಅತ್ತೆಯ ವಿಚಾರ-ಎಂದರೆ ಅವಳ ಪೂರ್ವಚರಿತ್ರೆ-ಅದು ಹೇಗೋ ಎಲ್ಲರಿಗೂ ತಿಳಿದುಹೋಗಿತ್ತು. ಆದರೂ ಅವಳ ಬಗೆಗೆ ಬೀದಿಯ ಜನ ತುಟಿಪಿಟಿಕ್ಕೆನ್ನುತ್ತಿರಲಿಲ್ಲ. ಎಲ್ಲರೂ ಅವಳ 'ಅಥ್ವಾನ ಬಯ್ಗುಳ' ಬಾಯಿಗೆ ಹೆದರುತ್ತಿದ್ದರು. ಬಯ್ಯಲು ಯಾರೂ ಸಿಕ್ಕದಿದ್ದರೆ, ಬೀದಿಯ ಕತ್ತೆಯನ್ನೋ ನಾಯನ್ನೋ ಬಯ್ಯಲು ಮೊದಲು ಮಾಡಿಬಿಡುತ್ತಿದ್ದಳು. ಅವಳ ಬಯ್ಗುಳ

ಕಿರಿಚಾಟವನ್ನು ಮನಸ್ಸಿನಲ್ಲಿಟ್ಟುಕೊಂಡು, ನಮ್ಮ ಬಾಲವೃಂದದ ಕವಿಯೊಬ್ಬನು 'ನೀಲಮ್ನತ್ತೆ ಕಾಲಿಲ್ದ ಕತ್ತೆ' ಎಂಬ ಪದ್ಯಪಂಕ್ತಿಯನ್ನೂ ಕಟ್ಟಿಬಿಟ್ಟಿದ್ದ. ಅದನ್ನು ಅವಳು ಕೇಳುವ ಹಾಗೆ ಹೇಳುವ ಧೈರ್ಯಮಾತ್ರ ಪಡ್ಡೆ ಹುಡುಗರಿಗೂ ಇರಲಿಲ್ಲ. ಅಪ್ಪಿತಪ್ಪಿ ಯಾವನಾದರೂ ಹುಡುಗ ನೀಲಮ್ಮನ ಅತ್ತೆಯನ್ನು ರೇಗಿಸಿದನೋ,ಅವನ ತಾತ ಮುತ್ತಾತಂದಿರೆಲ್ಲಾ ಅವಳ ಬಾಯಲ್ಲಿ ಪುನರ್ಜನ್ಮಪಡೆದು ಬಂದುಬಿಡು ತ್ತಿದ್ದರು. "ನೀಲಮ್ಮನತ್ತೆಯ ಗೊಡವೆಗೆ ಹೋಗಬೇಡಿ, ನಿಮ್ಮ ದಮ್ಮಯ್ಯ" ಎಂದು ಬೀದಿಯ ಹಿರಿಯರೆಲ್ಲಾ ತಮ್ಮ ಕಿರಿಯರಿಗೆ ಬುದ್ಧಿ ಹೇಳುವುದು ಸರ್ವ ಸಾಮಾನ್ಯವಾಗಿತ್ತು. ನೀಲಮ್ಮನ ಅತ್ತೆ ತಾನು ಸಾಯುವವರೆಗೂ ಬೀದಿಯವರ ಈ ಮನ್ನಣೆಗೆ ಪಾತ್ರಳಾಗಿದ್ದು ಒಂದು ದಿನ ಕೈಲಾಸವಾಸಿಯಾದಳು. ಅಂದಿಗೆ ನೀಲಮ್ಮ ನಮ್ಮ ಬೀದಿಗೆ ಬಂದು ನಾಲ್ಕೈದು ವರ್ಷವಾಗಿತ್ತು. ನೀಲಮ್ಮ ಮಂಟಪಕಟ್ಟಿಸಿ, ತಮಟೆ ತರಿಸಿ, ತನ್ನ ಅತ್ತೆಯ ಶವಸಂಸ್ಕಾರವನ್ನು ವಿಜೃಂಭಣೆ ಯಿಂದ ನಡಸಿಬಿಟ್ಟಳು. ಗಣಾರಾಧನೆ ಮಾಡಿಸಿದಳು. ಈ ನಿಜ ಸಂಗತಿ ಗೊತ್ತಿಲ್ಲದ ಅವಳ ಸ್ವಜಾತಿಯವರು ಅವಳ ಗಂಡನನ್ನು ಪ್ರಶಂಸೆಮಾಡಿದರು.

ನೀಲಮ್ಮನ ಅತ್ತೆ ಸತ್ತಳೋ ಇಲ್ಲವೋ, ನೀಲಮ್ಮನ ಶೀಲದ ಬಗೆಗೆ ನೆರೆಹೊರೆಯಲ್ಲಿ ಅಲ್ಲಿ ಇಲ್ಲಿ 'ಗುಸಗುಸ ಪಿಸಪಿಸ' ಪ್ರಾರಂಭವಾಯಿತು. ಏನನ್ನಾದರೂ ಪಾಳುಗೈವ' ಚಪಲವುಳ್ಳವರು ಹೊಗೆಹತ್ತಿದ ಕಪ್ಪುಗೋಡೆಯ ಮೇಲೆ ಮಸಿಯ ಬೊಟ್ಟಿಡಹೋಗುವುದಿಲ್ಲ ; ಸ್ವಚ್ಛವಾದ ಸುಣ್ಣದ ಗೋಡೆಯ ಮೇಲೇ ಇಡಲೆಳಸುವರು. ಬಿಳಿಯ ಹಿನ್ನೆಲೆಯಮೇಲೆ ಕಪ್ಪುಮಸಿ ಅದೆಂತು ಎದ್ದು ಕಾಣುತ್ತದೆ ! ನೀಲಮ್ಮನ ಗತಿಯೂ ಹೀಗೆಯೆ ಆಯಿತು. ಪರಿಸ್ಥಿತಿಯೂ ಇದಕ್ಕೆ ಪೋಷಕವಾಗಿಯೇ ಇದ್ದಿತು.

ಆ ಮುದುಕಿ ಸತ್ತ ಕೆಲವು ಕಾಲವಾದ ಮೇಲೆ, ನಮ್ಮ ತಾಯಿಗೂ ಹಾಲಿನ ಹನುಮಕ್ಕನಿಗೂ ನಡೆದ ಮಾತುಕತೆ ನನ್ನ ಕಿವಿಗೆ ಬಿದ್ದಿತು. ಕೋಣೆ ಯಲ್ಲಿದ್ದ ನನ್ನನ್ನು ಗಮನಿಸದೆ, ಗಂಡಸರು ಯಾರೂ ಹತ್ತಿರನಲ್ಲಿಲ್ಲ ಎಂದು ಎಣಿಸಿ, ನಮ್ಮ ತಾಯಿ ಆ ಮಾತೆತ್ತಿದ್ದರು.

"ಏನೇ ಹನುಮಕ್ಕ, ನೀಲಮ್ಮನ ವಿಚಾರ ಏನೇನೋ ಆಡಿಕೋ ತಾರಲ್ಲ, ನಿಜವೇನೇ ?"

"ಜನದ ಬಾಯಿ ಕಟ್ಟೋಕೆ ಯಾರ ಕೈಲಿ ಸಾಧ್ಯ ತಾಯಿ ? ಸಾವಿರ ಆಡಿಕೋತಾರೆ. ಈಗ, ನನ್ನ ಯಿಚಾರ ಆಡಿಕೋತಾ ಇಲ್ವಾ ?"

"ಜನ ಹೇಳೋಹಾಗೆ, ನೀಲಮ್ಮನ ಅತ್ತೆ ಇರೋವರೆಗೆ 'ಒಂದು ಗಂಡು

ನೋಣಾನು ಸುಳೀತಾ ಇರಲಿಲ್ಲ' ಅವಳ ಮನೆಗೆ. ಈಗ ಯಾರು ಯಾರೋ? ತುಕ್ಕಾರಂತೆ ?"

"ಯಾರು ಯಾರೋ ಏನು, ನಾನು ಕಾಣದೋರು ? ಅವಳ ಅತ್ತೆ ಇರೋವರೆಗೆ ಅವಳ ಬಾಯಿಗೆ ಹೆದರಿ ಯಾರೂ ಆ ಕಡೆ ಹೋಗ್ತಾ ಇರ್ಲಿಲ್ಲ. ಜಂಗಮರು ಬಂದರೆ ಬಯ್ದು ಅಟ್ಟಿಬಿಡುತ್ತಾ ಇದ್ದಳು. ನೀಲಮ್ಮನಿಗೆ ಜಂಗಮರು ಅಂದರೆ ಭೋ ಭಕ್ತಿ ; ಅತ್ತೆ ಸತ್ತಮೇಲೆ ಕರೆದೂ ಕರೆದೂ ಎಡೆ ಮಡಗ್ತಾ ಇರ್ತ್ತಾಳೆ. ಅವರು ಹೊಟ್ಟೆತುಂಬ ಉಂಡು, ಹಂಗೇ ಅವಳ ಮನೇಲೇ ಒಸಿ ಸುದರಾಯಿಸಿಕೊಂಡು ಹೋಗ್ತಾರೆ. ನನ್ನ ಹಾಗೆ ದನ ಕಟ್ಟಿರೋರು ತವುಡು ಕೊಳ್ಳೋಕೆ ಹೋಗ್ತಾರೆ. ನಿಮ್ಮ ಗುಂಡಪ್ಪ ರಾಮಪ್ಪ (ನಾನು) ಹೋಗಾ ಕಿಲ್ವಾ ಅವಳ ಮನೆಗೆ ಈಗ, ಹಂಗೆ. ಜನ ಬಿಡಿ, ಇಲಿ ಹೋದರೆ ಹುಲಿ ಹೋಯ್ತು ಅಂತಾರೆ."

ಹನುಮಕ್ಕ ಹೇಳಿದ್ದು ದಿಟ ಎಂದು ನನಗಂತೂ ನಂಬಿಕೆಯಾಗಿತ್ತು. ನಮ್ಮ ಮನೆಯ ಹಸುವಿಗೆ ತವುಡು ತರಲೆಂದು ಗುಂಡಪ್ಪ ಈಚೀಚೆಗೆ ವಾರಕ್ಕೆ ಎರಡು ಸಲ ಮೂರು ಸಲ ಅವಳ ಮನೆಗೆ ಹೋಗಿಬರುತ್ತಿದ್ದುದುಂಟು. ಮೊದಮೊದಲು ನೀಲಮ್ಮನ ವಿಚಾರದಲ್ಲಿ ತುಂಬ ಸಹಾನುಭೂತಿಯಿಂದಿದ್ದ ನಾಟಕದ ಸುಬ್ಬಣ್ಣ ಕೂಡ ಗುಂಡಪ್ಪನಿಗೂ ನೀಲಮ್ಮನಿಗೂ ಗಂಟುಹಾಕಿ ಬಿಟ್ಟರು !

ಒಂದು ದಿನ ನಾನು ಗುಂಡಪ್ಪ ನೀಲಮ್ಮನ ಮನೆಗೆ ತವುಡು ತರಲೆಂದು ಹೋಗಿದ್ದಾಗ, ಗುಂಡಪ್ಪ ನಿಸ್ಸಂಕೋಚವಾಗಿ ಆ ಸಂಬಂಧದ ಮಾತು ಎತ್ತಿಯೇ ಬಿಟ್ಟ :

"ನಾನು ನಿಮ್ಮ ಮನೆಗೆ ನಾಳೆಯಿಂದ ಬರುವುದಿಲ್ಲ ನೀಲಮ್ಮ."–ಗಂಭೀರ ವಾಗಿ 'ನೋಟೀಸು' ಕೊಟ್ಟುಬಿಟ್ಟ ಗುಂಡಪ್ಪ.

"ಯಾಕೆ, ಗುರುವೆ ?"–ಗಾಬರಿಯಿಂದ ಕೇಳಿದಳು ನೀಲಮ್ಮ. (ನೀಲಮ್ಮ ಗುಂಡಪ್ಪನನ್ನು ಗೌರವದಿಂದ ಸಂಬೋಧಿಸುತ್ತಿದ್ದುದೇ ಹಾಗೆ.)

"ನೀನು ಗುರು ಅನ್ನುತ್ತಿ. ಜನ ನನ್ನನ್ನು ಪೋಕರಿ ಅನ್ನುತ್ತಾರೆ. ('ಶಿವ ಶಿವಾ !' ಎಂದು ನೀಲಮ್ಮ ಕಿವಿಮುಚ್ಚಿಕೊಂಡಳು.) ಈಗ ಬುದ್ಧಿ ಬಂತು ಕಣಮ್ಮ: ಹಣ್ಣಿನ ಗಿಡ ಇರುವ ತೋಟಕ್ಕೆ ದೇವರ ಪೂಜೆಗೆಂದು ಹೂಕೊಯ್ಯುವು ದಕ್ಕೂ ಹೋಗಬಾರದು. ಇದ್ದರೆ, ನಮ್ಮ ರಾಮರಾಯರ ಹಾಗಿರಬೇಕು. ನಿನ್ನನ್ನ ಇಲ್ಲಿಗೆ ಕರೆದು ತಂದವರೇ ಅವರು. ನಿನ್ನ ವಿಚಾರದಲ್ಲಿ ತುಂಬ

ಅಭಿಮಾನ ಅವರಿಗೆ. ಆದರೂ, ಬೀದಿಯಲ್ಲಿ ಬರುವಾಗ ನಿಮ್ಮ ಮನೆ ಕಡೆ ತಿರುಗಿಯಾದರೂ ನೋಡುತ್ತಾರೆಯೇ ಅವರು ?"

"ಬಿಡು ಗುಂಡಪ್ಪ, ಅದು ಅವರ ರಾಜಾಪಾರ್ಟಿನ ಗತ್ತು !" ಎಂದೆ ನಾನು, ನಗುತ್ತ.

"ನಿನ್ನ ಹಾಸ್ಯ ಇರಲಿ. ನಾನು ಹೇಳಿದ್ದು ನಿಜ."

"ಅವರು ಮಹಾನುಭಾವರು. ನಿಮ್ಮ ವೆಂಕಟರಮಣಯ್ಯನೋರ ಹಾಗೆ, ದೊಡ್ಡ ಥರ...." ಎಂದಳು ನೀಲಮ್ಮ, ತಲೆಬಾಗಿ.

ಕೆಲವು ಕ್ಷಣ ಗುಂಡಪ್ಪ ಮೌನವಾಗಿದ್ದ. ಬಳಿಕ—

"ಇನ್ನೊಬ್ಬರ ಗೃಹಕೃತ್ಯಕ್ಕೆ ತಲೆಹಾಕಬಾರದು. ಆದರೂ, ನಾನು ಹೇಳುವ ಮಾತು ಒಂದಿದೆ. ತಪ್ಪು ತಿಳಿಯದಿದ್ದರೆ ಹೇಳುತ್ತೇನೆ...." ಎಂದು ಅನುಮಾನಿಸಿ ಅನುಮಾನಿಸಿ ನುಡಿದ ಗುಂಡಪ್ಪ.

"ಅದೇನು, ಹೇಳಿ ಗುರುವೆ...."

"ನಿನ್ನ ಗಂಡನ ಕೈಹಿಡಿದು ಇಷ್ಟು ವರ್ಷ ಆಯ್ತು. ನಿನ್ನದು ಅಂತ ಒಂದು ಮಗು ಇದ್ದಿದ್ದರೆ ಇಷ್ಟೆಲ್ಲ ಮಾತಿಗೆ ಅವಕಾಶವೇ ಇರುತ್ತಿರಲಿಲ್ಲ. ಗಂಡನೊಂದಿಗೆ ನೀನು ಎಂದೂ ಸರಿಯಾಗಿ ಬಾಳುವೆ ಮಾಡಿದ್ದಿಲ್ಲ ಅಂತ ಶಾಮರಾಯರು ಹೇಳಿದಹಾಗೆ ನೆನಪು.... ಹಾಗೆ ಮಾಡಬಾರದು ತಾಯಿ. ಈಗಲೂ...."

"ನೀವು ತಪ್ಪು ತಿಳಿದಿದ್ದೀರಿ ಗುರುವೆ. ನನ್ನ ಗಂಡನ್ನ ಬಿಟ್ಟು ಒಂದು ಅರೆಗಳಿಗೆಯೂ ನಾನಿರಲಾರೆ. ಇಷ್ಟಕ್ಕೂ, ನನ್ನ ಗಂಡ ಯಾರು ಅಂತ ನೀವು ತಿಳಿದಿದ್ದೀರಿ ?"

ಗುಂಡಪ್ಪ ಕಣ್ಣರಳಿಸಿ ಬೆಕ್ಕಸಬೆರಗಾಗಿ ನಿಂತಿದ್ದ. ನಾನೂ ನಿಬ್ಬೆರಗಾಗಿಯೇ ನಿಂತಿದ್ದೆ.

"ಸಾಯುವ ಗಂಡನಿಗೆ ನನ್ನ ಕೈಯನ್ನು ಮಾತ್ರ ಹಿಡಿ ಅಂತ ಕೊಟ್ಟೆ. ಸಾಯದ ಗಂಡನಿಗೆ ನನ್ನ ತನುಮನ ಎಲ್ಲ ಅರ್ಪಿಸಿರುವೆ, ಗುರುವೆ. ಇಕೋ ನೋಡಿ, ಆ ಗಂಡ" ಎಂದು ಮೇಲುದದ ಮರೆಯಲ್ಲಿದ್ದ, ಲಿಂಗವನ್ನೊಳಗೊಂಡ ಬೆಳ್ಳಿಯ ಕರಡಿಗೆಯನ್ನು ತೆಗೆದು ತೋರಿಸಿದಳು. ಕಾಲೇಜಿನಲ್ಲಿ ಅದೇ ತಾನೆ ಮಹಾದೇವಿಯಕ್ಕನ ವಚನಗಳನ್ನು ಪಾಠವೋದಿದ್ದ ನನಗೆ ಅವಳ ನಿಲವು ಪೂರ್ತಿ ಅರ್ಥವಾಯಿತು. ಶಾಲೆಯಲ್ಲಿ ಕಲಿಯದ ಹಳ್ಳಿಯ ಹೆಣ್ಣಿನ ಸಂಸ್ಕಾರವನ್ನು ಕಂಡು ಅಚ್ಚರಿಯೆನಿಸಿತು.

ಹೀಗೆ, ನೀಲಮ್ಮ ನಮ್ಮ ಬೀದಿಯಲ್ಲಿ ಇದ್ದ ಹತ್ತು ಹದಿನೈದು ವರ್ಷಗಳ ಅವಧಿಯ ಕಡೆಕಡೆಯ ಭಾಗದಲ್ಲಿ ಕೆಲಜನರ ಆಡಿಕೆಗೆ ಗುರಿಯಾಗಿದ್ದುದುಂಟು.

ಆದರೂ, ಅವಳ ಮುಖದ ನಗೆ ಮಾತ್ರ ಮಾಸಿರಲಿಲ್ಲ. ಅವಳ ಒಳ ನೆಮ್ಮದಿಯು ಕುರುಹಾಗಿ, ಅವಳ ಬಾಳ ಬೆಳುದಿಂಗಳಾಗಿ ಅದು ಬೆಳಗುತ್ತಲೆ ಇದ್ದಿತು.

ಅವಳು ನಮ್ಮ ಬೀದಿಯನ್ನು ತೊರೆಯುವುದಕ್ಕೆ ಅನೇಕ ಸಂದರ್ಭಗಳು ಸಂಚುಮಾಡಿದಂತೆ ತೋರುತ್ತದೆ. ಮೊದಲನೆಯದಾಗಿ ಜನಾಪವಾದ ; ಅಸ್ಥಿಗತ ಜ್ವರದಂತೆ ವ್ಯಾಪಿಸುತ್ತಿತ್ತು ಅದು. ಎರಡನೆಯ ಮುಖ್ಯಕಾರಣ, ಮೊತ್ತಮೊದಲು ವರ್ಧಮಾನಯ್ಯನವರು ಅಕ್ಕಿಮಾಡುವ ಗಿರಣಿ ತೆರೆದು, ಬೇರೆ ಬೇರೆ 'ರೈಸು ಮಿಲ್ಲು'ಗಳು ಹುಟ್ಟಿಕೊಂಡದ್ದು. ಹೀಗಾಗಿ ನಮ್ಮ ಬೀದಿಯವರೂ ಕೂಡ ಮಿಲ್ಲಿನ ಕಡೆಗೇ ಧಾವಿಸತೊಡಗಿದರು. ನೀಲಮ್ಮನ ಕಾಯಕಕ್ಕೆ ದೊಡ್ಡ ಪೆಟ್ಟು ತಗಲಿತು. 'ಕೈಕೂಲಿಯ ಮಾಡಿಯಾದರೂ ಹೊಟ್ಟೆ ಹೊರೆವೆನಲ್ಲದೆ, ಮಾನವ ಮಾರಿಕೊಳ್ಳೆ' ಎಂಬ ಅವಳ ನಂಬಿಕೆಯ ಬೆಟ್ಟಕ್ಕೆ ವಿಧಿಯ ವಜ್ರಾಯುಧದ ಆಘಾತವೇ ಬಿದ್ದಿತು. ಪ್ರತಿನಿತ್ಯದ ಜೀವನವೇ ದುರ್ಭರವಾಯಿತು. ಅವಳ ಗಂಡ ಎನಿಸಿಕೊಂಡಿದ್ದವನು ಇದ್ದಕ್ಕಿದ್ದಂತೆ ಕಣ್ಮರೆಯಾದ. 'ದಕ್ಕದ ಹೆಂಡತಿಯ ಆಸೆ ಬಿಟ್ಟು ಸಿಕ್ಕಿದ ಸೂಳೆಯ ಹಿಂದೆ ಹೋದ' ಎಂದು ಸುಬ್ಬಣ್ಣನವರ ಊಹೆ. ನಿಜವನ್ನು ಯಾರೂ ಅರಿಯರು ; ನೀಲಮ್ಮನಿಗೂ ಅದು ತಿಳಿಯದು. ಅವಳು ಎದೆಗೆಡದೆ ಒಬ್ಬಿಬ್ಬರ ಮನೆಯ ಕೊಟ್ಟಣದ ಜೊತೆಗೆ, ಮುಸುರೆಕೆಲಸ ಮಾಡಿಕೊಂಡು ಕಾಲಯಾಪನೆ ಮಾಡತೊಡಗಿದಳು. 'ನಿನಗೆ ಹೇಳಿದ್ದಲ್ಲ ನೀಲಮ್ಮ ಈ ಕೆಲಸ' ಎಂದು ನಮ್ಮ ತಾಯಿ ಹೇಳಿದರೆ ಕೇಳಳು ; 'ಕಾಯಕಕ್ಕೆ ಕೀಳು ಮೇಲು ಎಂಬುದಿಲ್ಲ ಅಮ್ಮಾವರೆ' ಎಂದು ಸಮಾಧಾನಿಯಾಗಿ ಉತ್ತರಿಸುವಳು. 'ಮನೆಗೆಲ್ಲಾ ಒಬ್ಬಳೇ ಮಲಗುತ್ತೀಯಲ್ಲಾ, ಹೆದರಿಕೆಯಾಗುವುದಿಲ್ಲವೆ ?' ಎಂದು ಕೇಳಿದರೆ, 'ನನ್ನ ಗಂಡ ಇಲ್ಲವೆ ಜೊತೆಗೆ' ಎಂದು ನಗುವಳು. ಎಂದಿನ ನಿರ್ಮಲವಾದ ನಗೆ.

ಹೀಗೂ ಕೆಲವು ಕಾಲ ಸಂದಿತು.

ಒಂದು ದಿನ, ನೀಲಮ್ಮ ತನ್ನ ಪಾತ್ರೆ ಪರಟೆ ಮುಂತಾದ ಸಾಮಗ್ರಿಗಳನ್ನೆಲ್ಲ ಒಂದು ಗಾಡಿಗೆ ತುಂಬಿಕೊಂಡು, ಇನ್ನೊಂದು ಗಾಡಿಯಲ್ಲಿ ಒಬ್ಬ ಜಂಗಮಯ್ಯನೊಂದಿಗೆ ಓಡಿಹೋದಳೆಂದು ನೆರೆಹೊರೆಯೆಲ್ಲ ಗುಲ್ಲೋಗುಲ್ಲು ಮಾಡಿತು. ಆ ಜಂಗಮ ಅವಳ ಅಣ್ಣನೇ ಎಂಬುದು ಮಾತ್ರ (ನಮ್ಮ ಮನೆಯವರು ಹೊರತು) ಯಾರಿಗೂ ತಿಳಿಯದು. ತಾವು ಪಟ್ಟಿದ್ದ ಸಂಶಯದ ಮೊಳಕೆ ವೃಕ್ಷವಾಗಿ ಹೂಬಿಟ್ಟು ಹಣ್ಣುಬಿಟ್ಟಿತೆಂದು ಬೀದಿಯ ಮಂದಿಗೆ ಒಂದು

ವಿಧವಾದ ತೃಪ್ತಿಯ ನಲಿವು, ಹುಚ್ಚುಹಿಗ್ಗು ! ನಮ್ಮ ಮಾತಿನಲ್ಲಿ ನಂಬಿಕೆ ಹುಟ್ಟಲೇ ಇಲ್ಲ ಕೊನೆಗೂ.

ನಡೆದದ್ದು ಇಷ್ಟು : ಮನೆಗೆಲ್ಲಾ ಒಬ್ಬಳೇ ಆಗಿ, ಕಾಯಕವೂ ಕುಂಠಿತ ವಾದಮೇಲೆ, ತವರೂರಿಗೆ ಹೋಗಿಬಿಡಬೇಕೆನ್ನಿಸಿತು ಅವಳಿಗೆ. ನೀಲಮ್ಮ ಕೊಟ್ಟ ಹಳ್ಳಿಯ ವಿಳಾಸಕ್ಕೆ ನಾನೇ ಕಾಗದ ಬರೆದುಕೊಟ್ಟೆ. ಇಂಥ ದಿನ ಬಂದು ಕರೆದುಕೊಂಡು ಹೋಗುವುದಾಗಿಯೂ, ಪ್ರಯಾಣಕ್ಕೆ ಸಿದ್ಧವಾಗಿರಬೇಕೆಂದೂ ಅವಳ ಅಣ್ಣನಿಂದ ಉತ್ತರವೂ ಬಂತು. ಅದನ್ನೂ ನಾನೇ ಓದಿ ಹೇಳಿದೆ ನೀಲಮ್ಮನಿಗೆ. ಮನೆಯ ಬಾಡಿಗೆಯನ್ನೂ, ಬೀಗದ ಕೈಯನ್ನೂ ಶಾಮರಾಯರ ಮೂಲಕ ಮನೆಯ ಮಾಲಿಕರಿಗೆ ತಲಪಿಸಬೇಕೆಂದು ತಿಳಿಸಿ, ಅವುಗಳನ್ನು ನೀಲಮ್ಮ ನಮ್ಮ ತಾಯಿಗೆ ಒಪ್ಪಿಸಿ, ತನ್ನ ಅಣ್ಣನ ಜೊತೆ ಊರಿಗೆ ಹೋಗುವು ದಾಗಿ ಹೇಳಿ, ನಮ್ಮ ತಾಯಿಗೆ ಕಾಲುಮುಟ್ಟಿ ನಮಸ್ಕಾರಮಾಡಿ, ಬೀಳ್ಕೊಂಡು ಹೊರಟಳಂತೆ. ಪರಮೇಶ್ವರನೇ ಬಂದು ನಿಜ ಹೇಳಿದರೂ ಜನ ನಂಬುವರೋ ಇಲ್ಲವೋ ; ನಮ್ಮ ಈ ಸಾಕ್ಷ್ಯಗಳನ್ನು ನಂಬುವರೇ ?.

ನಂಬಿದರೂ ಒಂದೇ ಬಿಟ್ಟರೂ ಒಂದೇ. ಕೆಲಕಾಲವಾದಮೇಲೆ ನೀಲಮ್ಮ ನನ್ನು ಮರೆತೇಬಿಟ್ಟಿತು ನಮ್ಮ ಬೀದಿ. ನಾನು ಮಾತ್ರ ಇನ್ನೂ ಮರೆತಿಲ್ಲ. ನನ್ನ ನೆನಪಿನಲ್ಲಿ ಅವಳು ಬರಿಯ ಕೊಟ್ಟಣದ ನೀಲಮ್ಮನಲ್ಲ : ಬಸವಣ್ಣನವರ ಬೋಧೆಯನ್ನು ಬಾಯಲ್ಲಿ ನುಡಿಯಲಾರದವಳಾಗಿದ್ದರೂ ಆಚರಣೆಯಲ್ಲಿ ತಂದಿದ್ದ ವಳು ; ಮಹಾದೇವಿಯಕ್ಕನ ಕುಲದ ಕುಲೀನೆ ; ಕೈಲಾಸಪತಿಯಲ್ಲಿ ನಿಷ್ಠೆ ಯಿಟ್ಟಿದ್ದ ಪತಿವ್ರತೆ.

# ಆನೇಕಾಲು ರಾಮರಾಯರು

ಎರಡಕ್ಕರವ ಕಲಿಸಿದಾತ ಗುರು ಎಂದು ಕವಿಸೂಕ್ತಿ. ಎರಡಲ್ಲ, ಪುಸ್ತಕದಲ್ಲಿದ್ದ ಲಕ್ಷ ಅಕ್ಷರಗಳನ್ನೆಲ್ಲ ತಮ್ಮ ಶಿಷ್ಯಕೋಟಿಗೆ ಬಾಯಿಯ ಮೂಲಕ ಕಂಠಗತ, ಹೃದ್ಗತ, ಮನೋಗತ, ರಕ್ತಗತ, ಅಸ್ಥಿಗತ ಮಾಡಿಸುತ್ತಿದ್ದ ಮಹಾನುಭಾವರನ್ನು ಗುರು ಎಂದು ಕರೆಯದೆ ಇರಲಾದೀತೆ ? ಆದರೂ, ಇವರು 'ಮೇಷ್ಟ್ರು ರಾಮರಾಯರು' ಎಂದು ಪ್ರಸಿದ್ಧರಾಗದೆ, 'ಆನೇಕಾಲು ರಾಮರಾಯರು' ಎಂದು ನಮ್ಮ ಬೀದಿಯಲ್ಲಿ ಪ್ರಸಿದ್ಧರು. ಇರಲಿ, ಇದಕ್ಕೆ ಕಾರಣವನ್ನು ಆಮೇಲೆ ಹೇಳೋಣ. ಈ ರಾಮರಾಯರ ಪಾದಪದ್ಮಗಳ ಬಳಿ ಎನ್ನುವುದಕ್ಕಿಂತ ಅವರ ಗಿಡ್ಡಾದ ಗಿಣ್ಣು ಗಿಣ್ಣು ಬೆತ್ತದ ಬೆಚ್ಚನೆಯ ಸಾನ್ನಿಧ್ಯದಲ್ಲಿ ವಿದ್ಯೆಕಲಿತ ನಾನು ಇಂದು ಸುಮಾರು ೩೦-೪೦ ವರ್ಷಗಳಾದಮೇಲೆ— ಅವರನ್ನು ಕೇವಲ ಭಯಭಕ್ತಿಗಳಿಂದ ಸ್ಮರಿಸುವೆನಾದರೂ ಆಗ ಅವರನ್ನು ಕಂಡರೆ ಬರಿಯ ಭಯವೊಂದೇ ನನ್ನ, ನನ್ನ ಸಹಪಾಠಿಗಳೆಲ್ಲರ, ಹೃದಯ ಮನಗಳನ್ನು ತುಂಬಿದ್ದುದು. ಆ ಭಯಕ್ಕೆ ಅವರ ಬೆತ್ತವೊಂದೇ ಕಾರಣವಲ್ಲ ; ಅವರ ಆಕಾರವೂ ಕೂಡ.

ಅವರ ಆಕಾರದ ಮಾತು ಬಂದಿರುವುದರಿಂದ, ಅದರ ವಿಚಾರವಾಗಿಯೆ ಮೊದಲು ಹೇಳಿಬಿಡುತ್ತೇನೆ. ರಾಮರಾಯರು ಹುಡುಗರನ್ನು ತುಂಬ ಹೊಡೆಯುತ್ತಾರೆ ಎಂಬ ಮಾತು ಒಮ್ಮೆ ಬಂದಾಗ, "ಅವರು ಹೊಡೆಯದೆಯೇ ಹೈಕಳು ಅವರಿಗೆ ಹೆದರಿಕೊಳ್ಳುತ್ತಾರೆ. ಇನ್ನು ಹೊಡೆಯುವುದೇಕೆ, ಬುದ್ಧಿ ? ನನ್ನ ಕತ್ತಿಗಿಂತ ಅವರ ಬೆತ್ತ ಚುರುಕು" ಎಂದು ಒಮ್ಮೆ ನಮ್ಮ ತಂದೆಯವರಿಗೆ 'ತಲೆ' ಮಾಡುತ್ತ ಕ್ಷೌರದ ಪುಟ್ಟಯ್ಯ ನುಡಿದಿದ್ದ. ಪುಟ್ಟಯ್ಯ ತನ್ನ ಮಗನನ್ನು ಮುಂದಕ್ಕೆ ತರಬೇಕು ಎಂದು ಅವನನ್ನು ರಾಮರಾಯರ ಮನೆಗೆ 'ಮನೇಪಾಠ'ಕ್ಕೆ ಕಳಿಸುತ್ತಿದ್ದ. ಎಂಟು ವರ್ಷದ ಕೃಷ್ಣ 'ಕಂಸ'ರ ಪ್ರಥಮ ಸಂದರ್ಶನ ಮಾಡಿದಾಗ ಕಿರಿಚಿಕೊಂಡುಬಿಟ್ಟನಂತೆ ; ರಾತ್ರಿ ಕನವರಿಕೆಯಲ್ಲೂ ಕಿರಿಚಾಟ.

ಹೀಗೆ, ರಾಮರಾಯರ ಬೆತ್ತದ ಚುರುಕು ಅವರ ಭಯಂಕರ ಸ್ವರೂಪದ ಬಣ್ಣ ವನ್ನು ಏರಿಸಿತ್ತು ಎಂದೇ ಹೇಳಬೇಕು.

ರಾಮರಾಯರು ತಮ್ಮ ಹೆಂಡತಿಯ ಕಣ್ಣಿಗೆ ಹೇಗೆ ಕಾಣುತ್ತಿದ್ದರೋ ಏನೋ ನಾನು ಹೇಳಲಾರೆ. ಸದಾ ರೋಗಿಷ್ಠೆಯಾಗಿದ್ದುಕೊಂಡು ಪತಿಯ ಸೇವಾಭಾಗ್ಯವನ್ನು ಪಡೆದಿದ್ದ ಆಕೆಯ ದೃಷ್ಟಿಯಲ್ಲಿ ಪತಿದೇವರು 'ಮದನೋ-ಮನ್ಮಥೋ ಮಾರ'ನಲ್ಲದಿದ್ದರೂ ಸೌಮ್ಯಮೂರ್ತಿಯಾಗಿದ್ದರೆಂದೇ ನನ್ನ ಇಂದಿನ ಊಹೆ. ನಮ್ಮ ತಂದೆಯ ಬಲವಂತಕ್ಕೆ ನಾನೂ ಈ ಗುರುಭಯಂಕರರ ಶಿಕ್ಷಾಗೃಹಕ್ಕೆ ಕೆಲವು ಕಾಲ ಪಾದಯಾತ್ರೆ ಮಾಡಿದ್ದೆ. ಅವರ ಮನೆ ನಿಜವಾಗಿ ನಮ್ಮ ಬೀದಿಯಲ್ಲಿ ಇಲ್ಲದಿದ್ದರೂ, ಯಾತ್ರೆಗೈಯಬೇಕಾದಷ್ಟು ದೂರವೂ ಅಲ್ಲ. ನಮ್ಮ ಮನೆಯ ಎದುರು ಸಾಲಿನಲ್ಲಿ ಪಶ್ಚಿಮ ಭಾಗಕ್ಕೆ ಒಂದು ಅಡ್ಡಗಲ್ಲಿ ಇದೆ ; ಕೊಟ್ಟಣದ ನೀಲಮ್ಮನ ಮೂಲೆಯ ಮನೆಯ ಪಕ್ಕದ ಆ ಗಲ್ಲಿಯಲ್ಲಿ ಹತ್ತು ಮಾರು ಹಾದುಹೋದರೆ, ರಾಮರಾಯರ ಐದಂಕಣದ ಹೆಂಚಿನಮನೆ ಸಿಕ್ಕು ತ್ತಿತ್ತು. ಆದರೂ ಎರಡು ಫರ್ಲಾಂಗಿಗಿಂತ ಕಡಮೆಯಾದ ಈ ದೂರವನ್ನು ನಡೆಯಲು ಹತ್ತು ವರ್ಷದ ನನಗೆ ಕಾಲೇ ಬರುತ್ತಿರಲಿಲ್ಲ. ಹೆಜ್ಜೆ ಹೆಜ್ಜೆಗೂ ರಾಮರಾಯರ ಭಯಂಕರ ಸ್ವರೂಪ ನನ್ನನ್ನು ಹಿಂದಕ್ಕೇ ದೂಡುತ್ತಿತ್ತು. ಶಾಲೆಯಲ್ಲಿ ಏಟು ತಿನ್ನುವುದಲ್ಲದೆ ಮನೆಯಲ್ಲೂ ಇವರ ಬೆತ್ತದ ಬಿಸಿ ಉಣ್ಣ ಬೇಕಲ್ಲಾ ಎಂದೇ ನನಗೆ ಚಿಂತೆ, ದ್ವಿಗುಣಿತ ಭಯ. ಪುಟ್ಟಯ್ಯ ಹೇಳು ತ್ತಿದ್ದಂತೆ, ನಮನ್ನೆಲ್ಲಾ ಭಯಗೊಳಿಸುವುದಕ್ಕೆ ಅವರ ಉಗ್ರರೂಪವೇ ಸಾಕಾ ಗಿತ್ತು ; ಬೆತ್ತ ಬೇಕಾಗಿಯೇ ಇರಲಿಲ್ಲ.

ಇಷ್ಟು ಹೇಳಿಯೂ ಇನ್ನೂ ಅವರ ರೂಪವರ್ಣನೆಗೆ ನಾನು ತೊಡಗಿಲ್ಲ. ಏಕೆಂದರೆ ಅದು ಅವರ್ಣನೀಯ. ಸೂಚ್ಯವಾಗಿ ಮಾತ್ರ ಅದನ್ನು ನಿರ್ದೇಶಿಸ ಬಹುದಷ್ಟೆ. ಕಂಸ, ಘಟೋತ್ಕಚ, ಹಿರಣ್ಯಕಶಿಪು ಎಂದು ನಮ್ಮ ಗುಮಾಸ್ತೆ ಗುಂಡಪ್ಪ ಅವರನ್ನು ಸಂದರ್ಭೋಚಿತವಾಗಿ ಸಂಬೋಧಿಸುತ್ತಿದ್ದುದುಂಟು. "ನಮ್ಮ ಆನೇಕಾಲು ರಾಮರಾಯರಿಗೆ ನಿಮ್ಮ ಕಂಪೆನಿಯಲ್ಲಿ ರಾಕ್ಷಸನ ಪಾರ್ಟು ಕೊಡಿಸಿ. ಲಕ್ಷ್ಮೀಪತಿಶಾಸ್ತ್ರಿಗಳನ್ನು ಮೀರಿಸಿಬಿಡುತ್ತಾರೆ. ಹೆಂಗಸರು ಮಕ್ಕಳೆಲ್ಲ ನಡುಗಿಹೋಗುತ್ತಾರೆ. ಬಣ್ಣದ ಖರ್ಚೂ ಉಳಿಯುತ್ತೆ" ಎಂದು ಗುಂಡಪ್ಪ ಒಮ್ಮೆ ಅರಮನೆ ಶಾಮರಾಯರಿಗೆ ಸಲಹೆ ಮಾಡಿದರಂತೆ. ಇದರ ಜೊತೆಗೆ, "ರಾಮರಾಯರೆಂದು ರಾಕ್ಷಸಗಣ" ಎಂಬ ಜಗಲಿ ಜೋಯಿಸರ ಉಕ್ತಿ ಬೇರೆ ! "ಈ ರಾಮರಾಯ ಮಕ್ಕಳನ್ನು ಕೊಂದು ತಿಂದುಬಿಡುತ್ತಾನೆ" ಎಂದು ಗುಂಡಪ್ಪ, ನಾನು ಅವರ ಮನೆಗೆ ಪಾಠಕ್ಕೆ ಹೋಗಲು ನಿರಾಕರಿಸಿ ಮುರಾದ

ಹಾಕುತ್ತಿದ್ದಾಗಲೆಲ್ಲ, ನನ್ನ ಪರ ವಕಾಲತ್ತು ವಹಿಸಿ ಉದ್ಗಾರ ತೆಗೆಯುತ್ತಿದ್ದ. ಕೊನೆಗೂ, ರಾಮರಾಯರ 'ಡಬ್ಬಲ್' ಶಿಕ್ಷೆ ತಪ್ಪಿದ್ದು ಗುಂಡಪ್ಪನ ಕೃಪೆಯಿಂದಲೇ.

ರಾಮರಾಯರ ಉಡುಪು ಎಷ್ಟೇ ಅಸ್ತವ್ಯಸ್ತ ಎನಿಸಿದ್ದರೂ ಅದರ ಗಾಂಭೀರ್ಯ ಅವರ ಭಯಂಕರ ಸ್ವರೂಪದ ಉಗ್ರತೆಯನ್ನು ಬಹುಮಟ್ಟಿಗೆ ತಗ್ಗಿಸಿಬಿಟ್ಟಿತ್ತು. ಆ ಉಗ್ರತೆಯ ನಗ್ನ ಸ್ವರೂಪವನ್ನು ಕಾಣಬೇಕಾಗಿದ್ದರೆ ಅವರ ಮನೆಯಲ್ಲೇ. ಅವರ 'ಮನೆಯ ಮಠ'ಕ್ಕೆ ಹುಡುಗರೆಲ್ಲ ಬೆಳಗ್ಗೆ ಎಂಟು ಗಂಟೆಯ ಹೊತ್ತಿಗೆ ಹೋಗುತ್ತಿದ್ದರು. ಅದೇ ತಾನೆ ರಾಮರಾಯರು ಸ್ನಾನ ಮಾಡಿ, ಸಂಧ್ಯಾವಂದನೆಯ ಶಾಸ್ತ್ರ ಮುಗಿಸಿ, ಪಾಕಶಾಲೆಯ 'ಡ್ಯೂಟಿ'ಯ ಮೇಲೆ ಹಾಜರಾಗುತ್ತಿದ್ದರು. ಈ ಕಾರಣ, ಒಂದು ಮೋಟು ಪಂಚೆಯ ಹೊರತು ಆಗ ರಾಮರಾಯರ ಮೈಮೇಲೆ ಯಾವ ವಸ್ತ್ರವಿಶೇಷವೂ ರಾರಾಜಿಸುತ್ತಿರಲಿಲ್ಲ. ಅವರ ಕೈಕಾಲು, ವಕ್ಷಸ್ಥಲ, ಬೆನ್ನು ಇವು ಸಂಪೂರ್ಣವಾಗಿ ಕೂದಲಿಂದ ಆಚ್ಛಾದಿತವಾಗಿದ್ದುವು. ಅವರನ್ನು ನೋಡಿದರೆ ಯಾರಿಗಾದರೂ ಕಪ್ಪು ಕರಡಿಯ ನೆನಪಾಗುವುದು. "ರಾಮರಾಯ ಎನ್ನುವ ಬದಲು ಜಾಂಬವಂತ ಅಂತ ಹೆಸರಿಟ್ಟುಕೊಂಡಿದ್ದರೆ ಚೆನ್ನಾಗಿತ್ತು ಇವರು" ಎಂದು ಗುಂಡಪ್ಪ ಆಗಾಗ್ಗೆ ನುಡಿಯುತ್ತಿದ್ದುದುಂಟು. ತನ್ನ ಮಗನ ಶಿಷ್ಯತ್ವದ ಕಾರಣದಿಂದಾಗಿ ತನಗೆ ಇಷ್ಟವಿಲ್ಲದಿದ್ದರೂ ಅವರ ಆಯುಷ್ಕರ್ಮದ ಕೈಂಕರ್ಯವನ್ನು ಒಪ್ಪಿಕೊಂಡಿದ್ದ ಪುಟ್ಟಯ್ಯ, ಗುಂಡಪ್ಪನ ಸಹರಾ ಮರುಭೂಮಿಯಂತಿದ್ದ ತಲೆಯಮೇಲೆ ನೆಪ ಮಾತ್ರಕ್ಕೆ ಕತ್ತಿಯಾಡಿಸುತ್ತ, ಒಮ್ಮೆ ಹೀಗೆ ವರ್ಣಿಸಿದ್ದು ನನಗೆ ನಿನ್ನೆ ಎಂಬಂತೆ ನೆನಪಿದೆ : "ಗುಂಡಪ್ನೋರೆ, ನಿಮ್ಮ ಸೇವೆಯನ್ನು ಬೇಕಾದರೆ ಬಿಟ್ಟೆ ಮಾಡ ಭೋದು. ರಾಮರಾಯರ ಮೈಮೇಲೆ ಕೈ ಮಡಗದ್ನೋ, ರಾಮದೇವರು ದಂಡಕಾರಣ್ಯ ಹೊಕ್ಕಂಗೆ ಆಗ್ತದೆ ನನಗೆ! ಅವರು ಏನಾರ ತಿಳಕೊಳ್ಳಲಿ ಅಂತ ನಿಖಾಲಸ್ನಾಗಿ ಹೇಳಿಬಿಟ್ಟೆ, 'ನೀವು ಕೊಡೋ ಎರಡಾಣೆ ನಿಮ್ಮ ತಲೆ, ಮುಖ, ಕಿವಿ, ಕತ್ತು, ಮುಂಗೈಗೆ ಸಾಲ್ದು. ಮೈಯೆಲ್ಲ ಮಾಡು ಅಂತೀರಿ; ಮೂರು ದಿನ ಕುಂತರೂ ಮುಗಿಯೊಲ್ಲ. ಅಲ್ದೆ, ಒಂದ್ಸಲ ಕತ್ತಿ ಸೋಕಿಸಿ ಬಿಟ್ರೋ ಮೈಗೆ, ಮೈಯೆಲ್ಲ ಜಡೆ ಹಣೀಬೇಕಾಗ್ತದೆ'—ಅಂತ. ನನ್ನ ಮಾತು ಕೇಳಿದ್ರು, ನಾನೂ ಬದುಕಿಕೊಂಡೆ, ಅವರೂ ಬದುಕಿಕೊಂಡ್ರು." ರಾಮರಾಯರು, 'ನಾಳೆ ಬೆಳಗ್ಗೆ ಪಾಠ ಇಲ್ಲ ಕಣ್ರೋ' ಅಂದರೆ 'ರಾಮಪಟ್ಟಾಭಿಷೇಕ' ಅಂತ ಹುಡುಗರಿಗೆಲ್ಲ ಪಾಠವಾಗಿಹೋಗಿತ್ತು. ಅವರು ವೈದಿಕ ಮನೆತನಕ್ಕೆ ಸೇರಿದವರಲ್ಲದಿದ್ದರೂ ಮೀಸೆ ಬಿಟ್ಟಿರಲಿಲ್ಲ. 'ಮೀಸೆ ಬಿಡದಿದ್ದರೆ ಏನು, ಅವರ

ಹುಬ್ಬೇ ಮೀಸೆಯಹಾಗಿದೆ !' ಎನ್ನುತ್ತಿದ್ದ ಗುಂಡಪ್ಪ. ಮೀಸೆ ತಿರುವಿದಹಾಗೆ ಹುಬ್ಬನ್ನೇತಿರುವುತ್ತಿದ್ದರು ಅವರು ! ಕೇಶಗುಚ್ಛಗಳೆರಡು ಅವರ ಕರ್ಣಾಭರಣ ಗಳಾಗಿದ್ದುವು. ಕಾಲಮೇಘ ಶ್ಯಾಮರಾದ ಇವರ ಮುಖ ಮಂಡಲದಲ್ಲಿ ಸೂರ್ಯಾಗ್ನಿ ಲೋಚನಗಳೋ ಎಂಬಂತೆ ಭಾಸವಾಗುತ್ತಿದ್ದ ಕೆಂಗಣ್ಣುಗಳೆರಡನ್ನು ನೋಡಿದರೆ, ಅವರು ಸದಾ ಕೋಪಿಸಿಕೊಂಡಿರುವಂತೆಯೇ ಯಾರಿಗಾದರೂ ತೋರಿಬರುತ್ತಿತ್ತು. ಸಹಜವಾಗಿಯೇ ಅಷ್ಟು ಕೆಂಪಾಗಿರುತ್ತಿದ್ದುವು ಅವರ ಕಣ್ಣುಗಳು. ಅವರು ಕೋಪಿಸಿಕೊಂಡಾಗಲಂತೂ ಕೇಳಬೇಕಾಗಿಯೇ ಇಲ್ಲ, ಕೆಂಡದ ಉಂಡೆಯಾಗಿಬಿಡುತ್ತಿದ್ದುವು ಅವು. ಅವರು ಮೇಷ್ಟ್ರುಗಿರಿಯ ಉಡುಪು ಧರಿಸಿ ತಮ್ಮ ಕರಾಳವಾದ ಕೇಶಮಯ ಕಾಯವನ್ನು ಮುಚ್ಚಿಕೊಂಡಿದ್ದಾಗ ಕೂಡ ಅವರನ್ನು ಭೀಕರವಾಗಿ ಮಾಡುತ್ತಿದ್ದ ಅಂಗಗಳೆಂದರೆ ಅವರ ಆರಕ್ತ ನೇತ್ರದ್ವಯಗಳು. ಅವರ ಇತರ ಅವಯವಗಳು ಭಯಂಕರ ಅಲ್ಲ ಎನ್ನು ವಂತಿರಲಿಲ್ಲ. ಅವರ ಆ ತೋಳುಗಳೋ ! ಕಬಂಧಬಾಹುಗಳೇ ಅವು ! ಅವರು ತಮ್ಮ ಮನೆಯಲ್ಲಿ ಪಾಠ ಹೇಳುತ್ತಿದ್ದ ಶಿಷ್ಯರೆಲ್ಲ ಬಹುಮಟ್ಟಿಗೆ ಹದಿನಾರರ ಹರೆಯದ ಒಳಗಿನವರಾದ್ದರಿಂದ ಬಾವಿಯಿಂದ ನೀರು ಸೇದುವುದಕ್ಕೂ ಸೌದೆ ಒಡೆಯುದವುಕ್ಕೂ ಬಟ್ಟೆ ಒಗೆಯುವುದಕ್ಕೂ ಅವರು ತಮ್ಮ ತೋಳುಗಳನ್ನೇ ಸಂಪೂರ್ಣವಾಗಿ ಅವಲಂಬಿಸಿದ್ದರು. ಅವರ ತೊಡೆಗಳೂ, ಕಾಲುಗಳೂ ಆ ತೋಳುಗಳಿಗೆ ಅನುಗುಣವಾಗಿಯೇ ಇದ್ದುವು. ನಮ್ಮ ಬೀದಿ ಆನೆಯ ಕರೋಟಿಯ ಹತ್ತಿರವೇ ಇರುವುದರಿಂದ ಅಲ್ಲಿ ಯಾವಾಗಲೂ ಆನೆಗಳ ಓಡಾಟ ಹೆಚ್ಚು. ಅವರ ಕಾಲುಗಳನ್ನು ನೋಡಿದರೆ ಯಾರಿಗಾದರೂ ಆನೆಯ ಕಾಲಿನ ನೆನಪಾಗುವುದು. "ಅವರ ಕಾಲುಗಳು ಏಕೆ ಕಾಣುತ್ತಿದ್ದುವು ? ಅವರು ಕಾಲು ಮುಚ್ಚುವಂತೆ ಪಂಚೆ ಉಟ್ಟಿರಲಿಲ್ಲವೆ ?" ಎಂದು ಯಾರಾದರೂ ಆಶ್ಚರ್ಯ ಪಡಬೇಕಾಗಿಲ್ಲ. ಅವರು ಬೀದಿಯಲ್ಲಿ ಓಡಾಡುತ್ತಿದ್ದುದೆಂದರೆ, ಮನೆ ಬಿಟ್ಟು ಶಾಲೆಗೆ ಹೋಗುವಾಗ ಮತ್ತು ಶಾಲೆಯಿಂದ ಮನೆಗೆ ಹಿಂದಿರುಗುವಾಗ. ಆಗ ಅವರು ಕಪ್ಪು 'ಲಾಂಗ್‌ಕೋಟ್' ಧರಿಸಿದರೂ ಉಡುತ್ತಿದ್ದ ಪಂಚೆ ಮಾತ್ರ ತುಂಡು ; ಅದನ್ನು ಉಡುವ ರೀತಿಯೂ ವಿಚಿತ್ರವೇ. ಹೀಗಾಗಿ, ಕರಿಯ ಕಲ್ಲಿನ ಕಂಭದಂತಹ ಅವರ ಕಾಲುಗಳು, ತೊಡೆಯ ಸ್ವಲ್ಪಭಾಗ, ಇವು ಹಿಂಭಾಗ ದಿಂದ ಚೆನ್ನಾಗಿ ಕಾಣುತ್ತಿದ್ದುವು. ನಮ್ಮ ಹಿಂದಿನ ಬೀದಿಯಲ್ಲೆ 'ಆನೇಕಾಲು' ರೋಗದವರಿದ್ದರು. ಅವರನ್ನು ಮಾತ್ರ 'ಆನೇಕಾಲು ಇಂಥವರು' ಎಂದೇ ಕರೆಯುತ್ತಿದ್ದುದು. ಅವರದ್ದು ರೋಗಿಷ್ಠಕಾಲು, ರಾಮರಾಯರದ್ದು ಬಲಿಷ್ಠ

ಕಾಲು, ಇಷ್ಟೇ ವ್ಯತ್ಯಾಸ. ವ್ಯತ್ಯಾಸದಂತೆಯೇ ಸಾಮ್ಯವೂ ಎಲ್ಲರ ಮನಸ್ಸಿನಲ್ಲೂ ಖಚಿತವಾಗಿತ್ತು. ಆದರೂ ಯಾರೂ 'ಆನೇಕಾಲು ರಾಮರಾಯರು' ಎಂದು ಅವರನ್ನು ನಿರ್ದೇಶಿಸುವ ಸಾಹಸಕ್ಕೆ ಪ್ರಯತ್ನಿಸಿರಲಿಲ್ಲ. ಒಮ್ಮೆ ಆಗಂತುಕರೊಬ್ಬರು, 'ಆನೆಕಲ್' ರಾಮರಾಯರ ಮನೆ ಎಲ್ಲಿ ? ಎಂದು ನಮ್ಮ ಬೀದಿಯಲ್ಲಿ ಹುಡುಕಾಡುತ್ತಿದ್ದರು. ನೂರು ಮೈಲಿ ಆಚೆ ಬೆಂಗಳೂರು ಸಮೀಪದಲ್ಲಿರುವ 'ಆನೆಕಲ್' ಮೈಸೂರಿನ ನಮ್ಮ ಅಗ್ರಹಾರದ ಬಹುಮಂದಿಗೆ ಅಪರಿಚಿತ. ಆದರೆ ನಮ್ಮ ಬೀದಿಯ ಮೇಷ್ಟ್ರು ನಂಜುಂಡಯ್ಯನವರಿಗೆ 'ಮೈಸೂರು ಭೂವಿವರಣೆ' ಗೊತ್ತಿರಲಿಲ್ಲವೆ ? 'ಕವಿ ಕವಿಗೆ ಮುನಿವಂ' ಎಂಬ ಮಾತು ದಿಟವಾದರೆ, 'ಮೇಷ್ಟ್ರು ಮೇಷ್ಟ್ರಿಗೆ ಕೆರಳುವಂ' ಎಂಬುದೂ ದಿಟವೆ. 'ರಾಮರಾಯ ನಡಸುತ್ತಿರುವುದು ಮಠವಲ್ಲ, ದೊಡ್ಡಿ, ದೊಡ್ಡಿ. ಹಿಂದಿನ ಕಾಲದ ಕೂಲಿಮಠ ಎಷ್ಟೋ ಮೇಲು' ಎಂದು ನಂಜುಂಡಯ್ಯನವರು ಜಗಲಿಯ ಮೇಲೆ ಕುಳಿತು ನಶ್ಯ ಏರಿಸುತ್ತ ಎಷ್ಟೋ ವೇಳೆ ನಮ್ಮ ತಂದೆಯೊಡನೆ ನುಡಿದದ್ದನ್ನು ಕೇಳಿ ಬಲ್ಲೆ. ಹೀಗಿದ್ದುದರಿಂದ, ಆಗಂತುಕರು ರಾಮರಾಯರ ವಿಚಾರವಾಗಿ ನಂಜುಂಡಯ್ಯನವರನ್ನು ಪ್ರಶ್ನಿಸಿದಾಗ ಅವರ ಬಾಯಿಂದ ಯಾವ ರೀತಿ ಉತ್ತರಗಳು ಹೊರಟಿದ್ದಿರಬಹುದು ಎಂಬುದನ್ನು ಸುಲಭವಾಗಿ ಊಹಿಸಬಹುದು. ನಶ್ಯದ ಭಿಕ್ಷೆಗಾಗಿ ನಮ್ಮ ಗುಂಡಪ್ಪ ನಂಜುಂಡಯ್ಯನವರ ಬಳಿ ಇದ್ದಾಗ ಪ್ರಶ್ನೋತ್ತರ ನಡೆಯಿತಾದ್ದರಿಂದ, ಅದು ಇಲ್ಲಿ ಉಲ್ಲೇಖನಾರ್ಹ :

"ರಾಮರಾಯರ ಮನೆ ಇದೇ ಬೀದಿಯಲ್ಲಿ ಇದೆಯಂತಲ್ಲ ಸ್ವಾಮಿ, ಯಾವುದು, ಸ್ವಲ್ಪ ತೋರಿಸುತ್ತೀರಾ ?" ಎಂದು ಆಗಂತುಕರು ಪ್ರಶ್ನಿಸಿದರು.

"ಯಾವ ರಾಮರಾಯರು ?" ನಂಜುಂಡಯ್ಯನವರ ಮರುಪ್ರಶ್ನೆ.

"ಸ್ಕೂಲು ಮೇಷ್ಟ್ರು ರಾಮರಾಯರು."

"ಸುಮ್ಮನೆ ಸ್ಕೂಲು ಮೇಷ್ಟ್ರು ಅಂದರೆ ಗೊತ್ತಾಗುವುದಿಲ್ಲ. ಆ ಮುಟ್ಠಾಳ ಕೆಲಸ ಮಾಡುತ್ತಿರುವವರು ಈ ಆಸುಪಾಸಿನಲ್ಲಿ ನಾಲ್ಕಾರು ಮಂದಿ ಇದೇವೆ.... ರಾಮರಾಯರೇ ಇಬ್ಬರಿದಾರೆ ?"

['ವಿದ್ಯಾದಾನಮಾಡುವುದು ಮುಟ್ಠಾಳ ಕೆಲಸವೇ ನಂಜುಂಡಯ್ಯನವರೆ? ಬಿಡುತು ಅನ್ನಿ' ಎಂದು ಮಧ್ಯೆ ಬಾಯಿಹಾಕಿದ ಗುಂಡಪ್ಪ.]

"ಎ. ರಾಮರಾಯರು ಸ್ವಾಮಿ."

"ಎ. ರಾಮರಾಯರು, ಬಿ. ರಾಮರಾಯರು, ಸಿ. ರಾಮರಾಯರು ಅಂದರೆ ನಮಗೆ ಗೊತ್ತಾಗುವುದಿಲ್ಲ. ನಾವು ಹಳೆಯಕಾಲದವರು. ತಂದೆಯ

ಹೆಸರು ಊರ ಹೆಸರು ಆದರೆ ಅದನ್ನು ಬಿಡಿಸಿ ಹೇಳಬೇಕು. ಆನಂದರಾಯರ ಮಕ್ಕಳು ರಾಮುರಾಯರೆ ?"

"ಅವರ ತಂದೆಯ ಹೆಸರು ನನಗೆ ಗೊತ್ತಿಲ್ಲ ಸ್ವಾಮಿ. ಅವರ ಊರು ಆನೆಕಲ್. ಅಂದರೆ ಅವರ ತಂದೆ ತಾತ ಇದ್ದುದು ಅಂತ ಇಟ್ಟುಕೊಳ್ಳಿ. ಆನೆಕಲ್ ರಾಮುರಾಯರು ಅಂದರೆ ಗೊತ್ತಾಗುತ್ತೋ ಇಲ್ಲವೋ ಅಂತ ರೂಢಿಯಾಗಿರುವ ಹೆಸರನ್ನೇ ಹೇಳಿದೆ...."

"ಓಹೋ, ಆನೇಕಾಲು ರಾಮುರಾಯರೋ...."

[ಗುಂಡಪ್ಪ ನಗು ತಡೆಯಲಾರದೆ ಕೈಯಿಂದ ಬಾಯಿಮುಚ್ಚಿಕೊಂಡ.]

"ಆನೇಕಾಲು !....ಅಲ್ಲ ಸ್ವಾಮಿ, ಆನೆಕಲ್...."

"ಆನೆಕಲ್ ಎಂದರೆ ಏನು ಅರ್ಥವಾಗುತ್ತೆ ? ಆಲಿಕಲ್ಲು ಅಂದರೆ ಒಂದು ರೀತಿ ಅರ್ಥ ಆಗುತ್ತೆ. ಅದು ಇಲ್ಲವೋ, ಆನೆಕಾಲ್ ಎನ್ನಬೇಕು...."

"ಇರಬಹುದು, ಇರಬಹುದು...."

"ಇರಬಹುದು ಏನು, ಇರುವುದು ಹಾಗೆಯೇ. ಆನೆಕಾಲ್‌ನಿಂದ ಬಂದ ರಾಮುರಾಯರೇ ಆಗಬೇಕು. ಆನೆಕಾಲು ರಾಮುರಾಯರ ಮನೆಯಾದರೆ...."

"ನಾನು ತೋರಿಸುತ್ತೀನಿ ಬನ್ನಿ" ಎಂದು ಗುಂಡಪ್ಪ ಆಗಂತುಕರನ್ನು ಕರೆದೊಯ್ದ.

ಅಂದಿನಿಂದ ರಾಮುರಾಯರಿಗೆ 'ಆನೇಕಾಲು' ಎಂಬ ವಿಶೇಷಣ ಅನ್ವರ್ಥಕವಾಗಿ ಅಂಟಿಕೊಂಡಿತು. ಈ ಹೊಸ ನಾಮಕರಣವನ್ನು ಗುಂಡಪ್ಪನಿಂದ ನಾಟಕದ ಸುಬ್ಬಣ್ಣನವರು ಕೇಳಿ ತಿಳಿದಾಗ, ಕೊಲಂಬಸ್ ಅಮೆರಿಕವನ್ನು ಕಂಡುಹಿಡಿದಷ್ಟು ಸಂತೋಷವಾಯಿತು ಅವರಿಗೆ. "ನಿತ್ಯ ನೋಡುತೀನಿ ಅವರ ಕಾಲನ್ನ ! ಇದು ನನಗೆ ಹೊಳೆದೇ ಇರಲಿಲ್ಲವಲ್ಲ !" ಎಂದು ಅಚ್ಚರಿಗೊಂಡರು. ನಾಟಕದ ಸುಬ್ಬಣ್ಣನವರ ಕಿವಿಗೆ ಬಿದ್ದಮೇಲೆ, ಆ ಹೆಸರು ನಮ್ಮ ಬೀದಿಯಲ್ಲಿ ಪ್ರಸಿದ್ಧವಾಗಲು ಬಹಳ ಕಾಲ ಬೇಕಾಗಲಿಲ್ಲ.

ನಮ್ಮ ಬೀದಿಯವರು ತಿಳಿದುಕೊಂಡಷ್ಟು ಕ್ರೂರಿಗಳಾಗಿರಲಿಲ್ಲ ರಾಮುರಾಯರು ಎಂದು ನನ್ನ ಭಾವನೆ. ನನ್ನ ಸ್ವಂತ ಅನುಭವದಿಂದ ಈ ಮಾತನ್ನು ಹೇಳುತ್ತೇನೆ. ಆಗಿನ ಕಾಲದಲ್ಲಿ ಶಿಷ್ಯರನ್ನು ದಂಡಿಸದೆ ಇದ್ದ ಉಪಾಧ್ಯಾಯರು ಯಾರು ? 'ದಂಡಂ ದಶಗುಣಂ ಭವೇತ್' ಎಂಬ ವಾಕ್ಯಕ್ಕೆ ಮನ್ನಣೆ ಇದ್ದ ಕಾಲ ಅದು. ಎಷ್ಟೇ ಪ್ರೀತಿಯಿಂದ ಕಲಿಸಿದರೂ ಕಲಿಯದ ಮೊಂಡು ವಿದ್ಯಾರ್ಥಿಗಳಿಗೆ ದಂಡವೇ ಮದ್ದು ಎಂದು ಉಭಯಪಕ್ಷಗಳೂ ಒಪ್ಪಿದ್ದ ಕಾಲ ಅದು. ಹೈಸ್ಕೂಲಿನ

ಉಪಾಧ್ಯಾಯರೇ ತರಗತಿಯ ಶಿಸ್ತನ್ನು ಕಾಪಾಡುವುದಕ್ಕೋ ಇಲ್ಲವೆ ತಮ್ಮ ಮರ್ಯಾದೆಯನ್ನು ಕಾಪಾಡಿಕೊಳ್ಳುವುದಕ್ಕೋ ಸಂದರ್ಭಾನುಸಾರ ದಂಡೋಪಾಯ ವನ್ನು ಅನುಸರಿಸುತ್ತಿದ್ದರು ಎಂದಮೇಲೆ, ಮಾಧ್ಯಮಿಕ ಮೊದಲನೆಯ ತರಗತಿಯ ಉಪಾಧ್ಯಾಯರಾಗಿದ್ದ ರಾಮರಾಯರು ಗಿಣ್ಣುಗಿಣ್ಣಾದ ಒಂದು ಮೋಟು ಬೆತ್ತ ವನ್ನು ಬಹು ಭದ್ರವಾಗಿ ಕಾಪಾಡಿಕೊಂಡಿದ್ದರು ಎಂದರೆ ಅಚ್ಚರಿಪಡಬೇಕಾ ಗಿಲ್ಲ. ಮಾಧ್ಯಮಿಕ ಶಾಲೆಯ ಎಲ್ಲ ತರಗತಿಗಳ ಉಪಾಧ್ಯಾಯರೂ ತಮ್ಮ ತಮ್ಮ ಆಕಾರ ಶಕ್ತಿಗಳಿಗೆ ಅನುಗುಣವಾದ ಬೆತ್ತವನ್ನು ಇಟ್ಟುಕೊಂಡೇ ಇದ್ದರು. ಆ ಶಾಲೆಯಲ್ಲಿ ಪೂರ್ತಿ ವ್ಯಾಸಂಗಮಾಡಿದ ನಾನು ಎಲ್ಲ ಉಪಾಧ್ಯಾಯರ ಕೈ ಗುಣವನ್ನೂ ತಕ್ಕಮಟ್ಟಿಗೆ ಸವಿದಿದ್ದೇನೆ. ಚಕ್ರವರ್ತಿಯವರ ವಕ್ರಕಾಷ್ಠ, ಕೃಷ್ಣಯ್ಯಂಗಾರರ ಕುಳ್ಳಬೆತ್ತ, ಶಾಮರಾಯರ ಛಡೀಬೆತ್ತ, ಕ್ಲಾಸಿಂದ ಕ್ಲಾಸಿಗೆ ಅಲೆಯುತ್ತಿದ್ದ 'ಕನ್ನಡ ಮುನಷಿ'ಯವರ ರೂಲು ದೊಣ್ಣೆ,–ಈ ಎಲ್ಲ ಬಗೆಯ ದಂಡಕೋಲುಗಳ ಬಿಸಿಯನ್ನೂ ನಾನು ಉಂಡಿದ್ದೇನೆ. ನಿಷ್ಪಕ್ಷಪಾತವಾಗಿ ಹೇಳುವುದಾದರೆ, ರಾಮರಾಯರ ಆಕೃತಿಯಂತೆಯೇ ಅವರ ಗಿಣ್ಣುಬೆತ್ತವೂ ಭಯಂಕರವಾಗಿ ಕಂಡರೂ, ಏಟುಗಳು ಮಾತ್ರ ಅಷ್ಟು ಭಯಂಕರ ಅಲ್ಲ. ವಿದ್ಯಾರ್ಥಿಗಳು ಕೈನೀಡದೆ ಹೋದರೆ, ಇತರ ಉಪಾಧ್ಯಾಯರುಗಳು ಮೈ ಕೈ ಮುಖ ಎನ್ನದೆ ಸಿಕ್ಕಾಬಟ್ಟೆ ಹೊಡೆದುಬಿಡುತ್ತಿದ್ದರು. ಆದರೆ, ರಾಮರಾಯರ ಬೆತ್ತ ಬೆವರುಕುಡಿದಿರುವಷ್ಟು ಯಾರ ಬೆತ್ತವೂ ಕುಡಿದಿರಲಿಲ್ಲ. ಅವರ ಹೊಡೆತ ಗಳದ್ದೇ ಒಂದು ಗಣಿತಶಾಸ್ತ್ರ ಏರ್ಪಟ್ಟಿತ್ತು. ಒಂದು ಪ್ರಶ್ನೆಗೆ ಉತ್ತರ ಹೇಳಲು ತಪ್ಪಿದರೆ ಒಂದೇಟು, ತರಗತಿಗೆ ಲೇಟಾಗಿ (ಎಂದರೆ ಅವರಿಗಿಂತ ಲೇಟಾಗಿ) ಬಂದರೆ ಎರಡೇಟು, ಪಕ್ಕದ ವಿದ್ಯಾರ್ಥಿಯೊಂದಿಗೆ ಮಾತಾಡಿದರೆ ಮೂರೇಟು, ತೂಕಡಿಸಿದರೆ ನಾಲ್ಕೇಟು, 'ಕಾಪಿ' ಹೊಡೆದರೆ ಐದೇಟು, ತರಗತಿ ಯಲ್ಲಿ ತಿಂಡಿ ತಿಂದರೆ ಆರೇಟು, ಹೇಳದೆ ಕೇಳದೆ ತರಗತಿಗೆ ತಪ್ಪಿಸಿಕೊಂಡರೆ ಏಳು, ಚಾಡಿ ಮತ್ತು ಸುಳ್ಳು ಹೇಳಿದರೆ ಎಂಟು, ಪುಸ್ತಕ ಪೆನ್ಸಿಲ್ಲು ಮುಂತಾ ದ್ದನ್ನು ಕದ್ದರೆ ಒಂಬತ್ತು, ಉಪಾಧ್ಯಾಯರನ್ನು (ಮುಖ್ಯವಾಗಿ ತಮ್ಮನ್ನು) ಯಾವ ರೀತಿಯಲ್ಲೇ ಆಗಲಿ ಹಾಸ್ಯಮಾಡಿದ್ದು ಗಮನಕ್ಕೆ ಬಂದರೆ ಹತ್ತು– ಹೀಗೆ ಅಪರಾಧದ ಮಟ್ಟಕ್ಕೆ ಅನುಗುಣವಾಗಿ ಏಟಿನ ಎಣಿಕೆ ಏರುತ್ತ ಹೋಗು ತ್ತಿತ್ತು. ಹೀಗಾಗಿ, ಒಬ್ಬರಿಗಾದ ಶಿಕ್ಷೆಯಿಂದ ಇತರರು ಮೊದಲೇ ಎಚ್ಚರಿಕೆ ಯಿಂದಿರುತ್ತಿದ್ದರು. ರಾಮರಾಯರ ತರಗತಿಯಲ್ಲಿ ಒಟ್ಟಿನಮೇಲೆ ಅತಿಶಿಕ್ಷೆಯ ಪ್ರಸಂಗಗಳೇ ಕಡಮೆ. ಅವರ 'ಭಯಂಕರ' ಸ್ವರೂಪ, ಅವರು ಬೆತ್ತ ಎತ್ತುತ್ತಿದ್ದ ಗತ್ತು, ಹೊಡೆಯುವಾಗ ಮಾಡುತ್ತಿದ್ದ ಆರ್ಭಟ, ಅವರ ಹೊಡೆತದ

ಗಣಿತಶಾಸ್ತ್ರ—ಇವನ್ನೆಲ್ಲ ಕಂಡ ವಿದ್ಯಾರ್ಥಿಗಳು ಅಕಸ್ಮಾತ್ ಒಮ್ಮೆ ಒಂದು ತಪ್ಪೆಸಗಿದರೆ ಮತ್ತೆ ಅದನ್ನು ಎಸಗುತ್ತಿರಲಿಲ್ಲ. ರಾಮುರಾಯರ ರುಮಾಲು ಬಿಚ್ಚಿಹೋಗುತ್ತಿದ್ದುದೇ ಹೆಚ್ಚು; ಒಂದೆರಡುವೇಳೆ ಅವರ ಪಂಚೆಯು ಕಚ್ಚೆ ಬಿಚ್ಚಿರುವುದೂ ಉಂಟು; ವಿದ್ಯಾರ್ಥಿಗಳ ತೂಕಡಿಕೆ ಅಪರಾಧವಾದರೂ ಅವರ ತೂಕಡಿಕೆ ನಿತ್ಯನಿರಂತರ; ಅವರ ಪುಂಖಾನುಪುಂಖವಾದ ತೇಗುಗಳು, ಅಪರೂಪ ನಶ್ಯಸೇವನೆಯು ಆನಂದೋದ್ಗಾರಗಳೆನ್ನಬಹುದಾದ ಸೀನುಗಳು, ಅವರ ಪ್ರಕೃತಿಗೆ ಅಂಟಿಕೊಂಡು ಬಂದ ಕೆಮ್ಮು ಮತ್ತು ತತ್ಪರಿಣಾಮಗಳಾದ ಕಫೋಚ್ಚಾಟನೆ ಕ್ಯಾಕರಿಕೆಗಳು—ಇವೆಲ್ಲ ಪ್ರತಿದಿನವೂ ಒಂದು ವೇಳಾಪಟ್ಟಿಯ ಪ್ರಕಾರ ರಾಮುರಾಯರ ತರಗತಿಯ ಬದುಕಿನ ರಿಜಿಸ್ಟರಿನಲ್ಲಿ ತಮ್ಮ ಹಾಜರಾತಿಯನ್ನು ಹಾಕಿಯೇ ತೀರುತ್ತಿದ್ದವು. ಒಂದು ಸಲ ರಾಮುರಾಯರು ಸೀತಾಗ ಒಬ್ಬ ಸಾಬರ ಹುಡುಗ ನಗು ತಡೆಯಲಾರದೆ ನಕ್ಕುಬಿಟ್ಟ; ಇದಕ್ಕೆ ಹೊಡೆಯುವುದು ತರವಲ್ಲ ಎಂದು ಎಣಿಸಿ, ಪಕ್ಕದ ತರಗತಿಯ ಉಪಾಧ್ಯಾಯರಿಂದ ಒಂದು ಚಿಟಿಕೆ ನಶ್ಯ ತರಿಸಿ, (ರಾಮುರಾಯರಿಗೆ ನಶ್ಯದ ಅಭ್ಯಾಸ ಇದ್ದರೂ ಅದನ್ನು ಕೊಂಡಿಡುವ ದುಂದುಗಾರಿಕೆಗೆ ಹೋಗುತ್ತಿರಲಿಲ್ಲ ಅವರು), ಅದನ್ನು ಆ ಹುಡುಗನ ಮೂಗಿನ ಹತ್ತಿರ ಹಿಡಿದು, ಅವನಿಗೆ ಸೀನಿನಮೇಲೆ ಸೀನು ಬಂದಾಗ, "ಸೀನು ಬಂದರೆ ನಗುತೀಯಾ ಕತ್ತೇಭಡವಾ! ಈಗ ನಗೊ, ನಗೋ! ನೀವೂ ನಗರೋ, ಅದು ಯಾಕೆ ಸುಮ್ಮನಿದ್ದೀರಿ?" ಎಂದು ತಮ್ಮ ಕೆಂಗಣ್ಣ ನೋಟವನ್ನು ತರಗತಿಯ ಸುತ್ತ ಹರಿಸಿದರು. ಒಬ್ಬನಾದರೂ ನಗಬೇಕಲ್ಲ! ನಗುವಿನ ಅಲೆಗಳ ಮೇಲೆ ತೇಲಬೇಕಾಗಿದ್ದ ತರಗತಿಯೆಲ್ಲಾ ಗಪ್‌ಚಿಪ್! ಈ ರೀತಿ, ರಾಮುರಾಯರು ಶಿಷ್ಯರಿಗೆ ವಿಚಿತ್ರಶಿಕ್ಷೆಗಳನ್ನು ವಿಧಿಸುತ್ತಿದ್ದುದೂ ಉಂಟು. ತೂಕಡಿಕೆಗಾಗಿ ನಿನ್ನೆ ಏಟು ತಿಂದರೆ ಇಂದು ತೂಕಡಿಸದೆ ಇರುವುದು ಹೇಗೆ? ಎಮ್ಮೆಹುಟ್ಟಿನ ತೂಕಡಿಸುವ ಒಬ್ಬಿಬ್ಬರು ವಿದ್ಯಾರ್ಥಿಗಳನ್ನು ಒಂಟಿ ಕಾಲಿನಮೇಲೆ ನಿಲ್ಲಿಸುತ್ತಿದ್ದುದು ಸಾಮಾನ್ಯ ದೃಶ್ಯವಾಗಿತ್ತು. ಸಾಹುಕಾರರ ಮಗ ಒಬ್ಬ, ವಯಸ್ಸಾದ ವಿದ್ಯಾರ್ಥಿ, ರಾಜಕುಮಾರನಹಾಗೆ ಉಡುಪು ಹಾಕಿಕೊಂಡು ಸಾಧಾರಣವಾಗಿ ರಾಮುರಾಯರಿಗಿಂತ ತಡವಾಗಿಯೇ ಬರುತ್ತಿದ್ದ ತರಗತಿಗೆ. ಕೆಲವು ದಿನ ಏಟುಕೊಟ್ಟು ಅವರಿಗೂ ಬೇಜಾರಾಯಿತು. 'ಪೀರಿಯಡ್' ಗಂಟೆ ಹೊಡೆಯುವವರೆಗೂ ಅವನನ್ನು ದ್ವಾರಪಾಲಕನ ಹಾಗೆ ಬಾಗಿಲಬಳಿ ನಿಲ್ಲಿಸಿಬಿಡುತ್ತಿದ್ದರು. ಆಮೇಲೆ ಈ 'ಶಿಸ್ತುಗಾರ, ಪುಟ್ಟಸ್ವಾಮಿ' (ರಾಮುರಾಯರು ಅವನಿಗೆ ಕೊಟ್ಟ ಬಿರುದು) ಹೊತ್ತಿಗೆ ಸರಿಯಾಗಿ ಬರಲು

ಮೊದಲು ಮಾಡಿದ. ತರಗತಿಯಲ್ಲಿ 'ಅರಸು' ವಿದ್ಯಾರ್ಥಿಯೊಬ್ಬನಿದ್ದ ; ಅವನ ಪೂರ್ತಿ ಹೆಸರು ಪುಟ್ಟರಾಜ ಅರಸ್ ಎಂದು. ಆಗಿನ ದಿನಗಳಲ್ಲಿ ಅರಸು ಜನಾಂಗಕ್ಕೆ, ವಿಶೇಷವಾಗಿ ಮೈಸೂರಿನಲ್ಲಿ, ಒಂದು ಬಗೆಯ ಕೆಲಸಕ್ಕೆ ಬಾರದ ಒಣ ಮರ್ಯಾದೆ ಸಲ್ಲುತ್ತಿತ್ತು. ಅರಸು ಕುಟುಂಬದವರನ್ನು ಎಲ್ಲರೂ 'ಬುದ್ಧಿ', 'ಪುಟ್ಟಬುದ್ಧಿ', 'ಚಿಕ್ಕಬುದ್ಧಿ' ಎಂದು ಸಂಬೋಧಿಸಬೇಕಾಗಿತ್ತು. ಪುಟ್ಟರಾಜ ಅರಸುವಿನ ಮನೆ ಶಾಲೆಗೆ ಬಹು ಸಮೀಪ. ಅವನು ಚಿಕ್ಕ ಹುಡುಗನೇ ಆದರೂ ಅವನಿಗೆ ತನ್ನ ಕುಲದ ಪ್ರಜ್ಞೆ, ಅದಕ್ಕೆ ಸಂಬಂಧಪಟ್ಟ ಒಣಜಂಭ, ಬಹಳ. ತನ್ನ ಜೊತೆಯ ಗೆಳೆಯರು ಏಕವಚನದಲ್ಲಿ ಹೆಸರು ಹಿಡಿದು ಮಾತಾಡಿಸಿದರೆ ಅವನು ಮಾತಾಡುತ್ತಲೇ ಇರಲಿಲ್ಲ. 'ಚಿಕ್ಕ ಬುದ್ಧೀ' ಎಂದರೇ 'ಪುಟ್ಟರಾಜ' ಬಾಯಿ ತೆರೆಯುತ್ತಿದ್ದುದು. ಬಂದ ಹೊಸದರಲ್ಲಿ, ಉಪಾಧ್ಯಾಯರು ಹಾಜರಾತಿ ಕೂಗುವಾಗ, 'ಪುಟ್ಟರಾಜ ಅರಸ್' ಎಂದು ಹೆಸರು ಕರೆದರೆ 'ಪ್ರಜೆಂಟ್ ಸಾರ್' ಎನ್ನುತ್ತಿದ್ದವನು, ಇತರ ಸಂದರ್ಭಗಳಲ್ಲಿ ಹೆಸರು ಹಿಡಿದು ಕೂಗಿದರೆ ಉತ್ತರ ಕೊಡುತ್ತಿರಲಿಲ್ಲ ! ಈ ವಿದ್ಯಾರ್ಥಿಯ ಹುಸಿಹೆಮ್ಮೆಯನ್ನು ಕಂಡು ರೇಗಿದ ರಾಮರಾಯರು, "ನಿನ್ನನ್ನು ಚಿಕ್ಕಬುದ್ಧಿ ಅಂತ ಕರೆಯಬೇಕೊ? ಯಾಕೆ, ದೊಡ್ಡ ಬುದ್ಧಿ ಅಂತಲೇ ಕರೆದುಬಿಡೋಣ ? ಲ್ರೋ, ಎಲ್ಲರೂ ಇವನನ್ನ ನಾಳೆಯಿಂದ 'ಪೆದ್ದಬುದ್ಧೀ' ಅಂತ ಕರೆಯಿರೋ" ಎಂದು ಹುಡುಗರ ಕಡೆ ತಿರುಗಿ ಹೇಳಿದರು. ಅವರು ಮಾಡಿದ ನಾಮಕರಣಕ್ಕೆ ತಕ್ಕಹಾಗೆ ಅವನು ಓದಿನಲ್ಲಿ 'ಬೃಹಸ್ಪತಿ.' ಹೀಗಾಗಿ, ಅವರ 'ಪ್ರಹಾರ ಗಣಿತಶಾಸ್ತ್ರ'ದ ಪ್ರಕಾರದ ಏಟುಗಳ ಜೊತೆಗೆ, ಆ ಶಾಸ್ತ್ರದ ವ್ಯಾಪ್ತಿಗೆ ಒಳಪಡದ ಸಣ್ಣ ಪುಟ್ಟ ಅಪರಾಧಗಳಿಗೆಲ್ಲ ಅವನಿಂದ 'ಭಸ್ಕಿ ಹೊಡಿಸು'ವುದು, 'ಕುರ್ಚಿ ಕೂಡಿಸು'ವುದು, ಕಾಲುಸಂದಿಯಲ್ಲಿ ಕೈತೂರಿಸಿ ಕಿವಿ ಹಿಡಿಸುವುದು ಮುಂತಾದ ವ್ಯಾಯಾಮ ಪ್ರದರ್ಶನಗಳನ್ನು ಮಾಡಿಸತೊಡಗಿದರು. 'ಚಿಕ್ಕ ಬುದ್ಧಿ'ಯವರಿಗೆ ಆಗುತ್ತಿದ್ದ ಶಿಕ್ಷಣ ಪ್ರಕರಣದ ದೂರು 'ದೊಡ್ಡಬುದ್ಧಿ'ಯವರವರೆಗೆ ಹೋಗಿ ಅವರು ಒಂದು ಶುಭದಿನ 'ದರ್ಬಾರು ಡ್ರೆಸ್' ಹಾಕಿಕೊಂಡು, ಹೆಡ್‌ಮಾಸ್ಟರನ್ನೂ ಜೊತೆಯಲ್ಲಿಯಲ್ಲಿ ಕರೆದುಕೊಂಡು ಬಂದು, ರಾಮರಾಯರನ್ನು 'ತರಾಟಗೆ' ತೆಗೆದುಕೊಂಡುಬಿಟ್ಟರು. ವಿದ್ಯಾರ್ಥಿಗಳಾದ ನಾವೆಲ್ಲ ಬೆಕ್ಕಸಬೆರಗಾಗಿ ಈ ವಿಚಾರಣೆಯ ಫಲಿತಾಂಶವನ್ನು ಕುತೂಹಲದಿಂದ ನಿರೀಕ್ಷಿಸುತ್ತಿದ್ದೆವು. ಬಹುಗಟ್ಟಿಗರೆಂದು ಹೆಸರಾಗಿದ್ದ ಹೆಡ್‌ಮಾಸ್ಟರು ಕೂಡ ಈ 'ದೊಡ್ಡಬುದ್ಧಿ'ಯವರ ಆಗಮನದಿಂದ ಭೀತರಾಗಿದ್ದರು ಎಂಬುದು ಅವರ ಮುಖಲಕ್ಷಣದಿಂದ ಸುಸ್ಪಷ್ಟವಾಗಿತ್ತು. ಆದರೆ, ರಾಮರಾಯರು ಎದೆಗೆಡಲಿಲ್ಲ. 'ದೊಡ್ಡಬುದ್ಧಿ'ಯವರನ್ನು ಪ್ರಶ್ನಿಸಿದರು:

"ತಮ್ಮ ನಾಮಧೇಯ...."

"ರಾಮುರಾಜ ಅರಸರು ಅಂತ. ಹೆಸರು ಕಟ್ಟಿಕೊಂಡೇನು? ಬುದ್ಧಿಯೋರೆ ಅಂತ ಕೂಗಿದರೆ ಸಾಕು."

"ಆಳುವ ಅರಸರನ್ನು ಭಕ್ತಿಯಿಂದ ಪ್ರಭೂ, ಮಹಾಪ್ರಭೂ, ಮಹಾಸ್ವಾಮಿಾ ಎಂತ ಕರೆಯುತ್ತೇವೆ. ಇತರರನ್ನು ಮರ್ಯಾದೆಯಿಂದ ಸ್ವಾಮಿಾ, ಸರ್, ಮಿಸ್ಟರ್....ಎನ್ನುತ್ತೇವೆ. ಎಲ್ಲಾ ಒಂದೆ, ಏನೂ ವ್ಯತ್ಯಾಸವಿಲ್ಲ, ನಮ್ಮಪ್ಪನ ಮಗ ನಾನು ಅಂದಹಾಗೆ. ತಾವು ರಾಜವಂಶದವರು, ಅರಸರು; ನಾನೋ, ಬಡಹಾರುವ. ಹಾಲಿನವರು, ಮೊಸರಿನವರು, ಆಳುಗಳು, ಕಡೆಗೆ, ನಮ್ಮ ಹಜಾಮ ಪುಟ್ಟಯ್ಯ ಎಲ್ಲರೂ ನನ್ನನ್ನೇ 'ಬುದ್ಧಿಯೋರೆ' ಅಂತ ಕೂಗುತಾರೆ. ಅಂತಹ ಸಾಮಾನ್ಯ ಹೆಸರಿನಿಂದ ತಮ್ಮನ್ನ ಸಂಬೋಧಿಸಬಹುದೇ, ತಾವೇ ಹೇಳಿ?"

ರಾಮುರಾಜೇ ಅರಸಿನವರು ಮೌನವಾಗಿದ್ದರು. ನಮ್ಮ ಮೇಷ್ಟ್ರು ಮುಂದುವರಿಸಿದರು :

"ಅರಸ ಎಂದರೆ ರಾಜ. ಅಚ್ಚ ಕನ್ನಡ, ಉಚ್ಚ ಸಂಸ್ಕೃತ. 'ರಾಜರೇ' ಎಂತ ಕೂಗುವುದು ಹೇಗಿದೆ, ಅರ್ಥ ಅನ್ವಯ ಇಲ್ಲದೆ 'ಬುದ್ಧೀ' ಎಂತ ಕೂಗುವುದು ಹೇಗಿದೆ ? ತಾವು **ದೊಡ್ಡ**ರಾಜರು, ತಮ್ಮ ಕುಮಾರ **ಪುಟ್ಟ**ರಾಜ. ಎಷ್ಟು ಅರ್ಥವತ್ತಾಗಿದೆ ಹೆಸರು ? 'ಪುಟ್ಟರಾಜ' ಎಂದರೇ ಸಾಕು. 'ಪುಟ್ಟರಾಜ ಅರಸು' ಎಂದರೆ ಜರೀಪೇಟಕ್ಕೆ (ಆಗ ರಾಮುರಾಜ ಅರಸರು ತಮ್ಮ ಆಕಾಶನೀಲಿಬಣ್ಣದ ಜರೀಪೇಟವನ್ನು ಸರಿಪಡಿಸಿಕೊಂಡರು). ಶಿರಪೇಷ್ ತುರಾಯಿ ಸೆಕ್ಕಿದ ಹಾಗೆ ಹೌದೋ ಅಲ್ಲವೋ ?"

ರಾಮುರಾಜ ಅರಸರು ಸಮ್ಮತಿ ಸೂಚಕವಾಗಿ (ಓತೀಕ್ಯಾತ ತಲೆತೂಗುವಂತೆ) ತಲೆತೂಗುತ್ತಿದ್ದರು.

"ಅಲ್ಲದೆ, ಇನ್ನೊಂದು ಸಂಗತಿ ಏನೂ ಅಂತೀರೋ ?"

"ಏನು ?"

"ಮೊದಮೊದಲು 'ಚಿಕ್ಕಬುದ್ದಿ' ಅಂತಲೇ ಕೂಗುತ್ತ ಇದ್ದೆ. 'ಚಿಕ್ಕಬುದ್ಧಿ, ತಲೆ ತುಂಬ....' ಅಂತ ಏನೇನೋ ಪ್ರಾಸಕಟ್ಟಿ, ಪಟಿಂಗ ಹುಡುಗರು ತಮ್ಮ ಕುಮಾರರನ್ನ ಗೇಲಿಮಾಡುವುದಕ್ಕೆ ಷುರುಮಾಡಿಬಿಟ್ಟರು. ನಿಮ್ಮ ಹುಡುಗನ ಮರ್ಯಾದೆ ಕಾಪಾಡುವುದಕ್ಕೆ, ತಾವು ಶಾಸ್ತ್ರೋಕ್ತವಾಗಿ ನಾಮಕರಣಮಾಡಿ ಇಟ್ಟ ಹೆಸರಿನಿಂದಲೇ ಕೂಗುವುದಕ್ಕೆ ಪ್ರಾರಂಭಮಾಡಿದೆ. ಅಲ್ಲವೆ

ಪುಟ್ಟರಾಜೇ ಅರಸ್ ?" ಎಂದು ರಾಮರಾಯರು ತಮ್ಮ ಪ್ರಿಯ ಶಿಷ್ಯನ ಕಡೆಗೆ ತೀಕ್ಷ್ಣನೋಟವೊಂದನ್ನು ಎಸೆದರು.

ರಾಮರಾಯರ ವಾದವೈಖರಿಗೆ ತನ್ನ ತಂದೆಯೇ ಸೋತು ಸುಮ್ಮನಾಗಿರುವುದು ಪುಟ್ಟರಾಜೇ ಅರಸಿನ ಗಮನಕ್ಕೆ ಬಾರದಿರಲಿಲ್ಲ. ಅಲ್ಲ ಎಂದರೆ ನಾರನೆಯ ದಿನ ಏನು ಶಿಕ್ಷೆ ಕಾದಿದೆಯೋ ? 'ಹ್ಞ' ಎಂದು ತಲೆಯಾಡಿಸಿದ, ಕೋಲೆ ಬಸವನ ಹಾಗೆ.

ರಾಮರಾಯರ ಶಿಕ್ಷಣಕ್ರಮದ ಪರಮರಹಸ್ಯವೆಂದರೆ 'ಉರುಹಚ್ಚಿಸು'ವುದು. ರಾಮರಾಯರೇನು, ಆಗ ಸಾಧಾರಣವಾಗಿ ಅನುಸರಿಸುತ್ತಿದ್ದ ಶಿಕ್ಷಣ ಬೀಜಮಂತ್ರವೇ ಅದು. ಅದನ್ನು ರಾಮರಾಯರು ಸಾರ್ವತ್ರಿಕವಾಗಿ, ಸಾರ್ವಕಾಲಿಕವಾಗಿ, ಸರ್ವವ್ಯಾಪಕವಾಗಿ, ತಮ್ಮ ಶಿಷ್ಯರನ್ನೆಲ್ಲ ಸರ್ವಜ್ಞರನ್ನಾಗಿ ಮಾಡಬೇಕೆಂಬ ಘನೋದ್ದೇಶದಿಂದ ಬಹು ನಿಷ್ಠೆಯಿಂದ ಅನುಷ್ಠಾನದಲ್ಲಿಟ್ಟಿದ್ದರು. ಎಂಥ ಮಂದಬುದ್ಧಿಯೇ ಆದರೂ ರಾಮರಾಯರ ಗಾಣಕ್ಕೆ ಹೆಗಲು ಕೊಟ್ಟುಬಿಟ್ಟರೆ, ರಘುನಾಥರಾಯರ ಭೂವಿವರಣೆ, ಶಾಮರಾಯರ ಚರಿತ್ರೆ, ಮಲ್ಲಪ್ಪನವರ 'ಶಬ್ದಾದರ್ಶ' ಮುಂತಾದ ಅಂದಿನ ಪ್ರಮಾಣಗ್ರಂಥಗಳ ಸರ್ವಾಂಶಗಳನ್ನೂ ಹೃದ್ಗತವಲ್ಲದಿದ್ದರೂ ಕಂಠಗತಮಾಡಿಕೊಂಡು, ಪ್ರಶ್ನೆ ಕೇಳುವುದೇ ತಡ, 'ಚಿನಕುರಳಿ' ಚಟಪಟಗುಟ್ಟಿದಹಾಗೆ, ಸಂಗೀತ ವಿದ್ಯಾರ್ಥಿ ಸರಳೆ ಕೂಗಿದಹಾಗೆ, ಸರಸರನೆ ಉತ್ತರಕೊಟ್ಟುಬಿಡುತ್ತಿದ್ದ. ಸೀಮೆಗೆ ಹೋಗಿ ಮರಳಿದ ಇಂದಿನ ಶಿಕ್ಷಣವೇತ್ತರು ಈ ಶಿಕ್ಷಣ ಕ್ರಮದ ಬಗೆಗೆ ವಕ್ರದೃಷ್ಟಿಯನ್ನು ಬೀರಬಹುದು. "ರಾಮರಾಯರಿಗೆ ಪಾಠ ಏನು ಹೇಳಿಕೊಡುವುದಕ್ಕೆ ಬರುತ್ತದೆ ? ಸುಮ್ಮನೆ ಉರು ಹಾಕಿಸುತ್ತಾರೆ"–ಎಂದು 'ಪಾಠ ಹೇಳಿಕೊಡು'ತ್ತಿದ್ದ ಅದೇ ಶಾಲೆಯ ಉಪಾಧ್ಯಾಯರೊಬ್ಬರು ಅವರನ್ನು ತೆಗಳಿದ್ದರಂತೆ. ಈ ತೆಗಳಿಕೆ ರಾಮರಾಯರ ಕಿವಿಗೂ ಬಿತ್ತು. ಅದಕ್ಕೆ ರಾಮರಾಯರು ಮುನಿಯಲಿಲ್ಲ. "ಓಹೋ ! ಈ ಪ್ರೊಫೆಸರು ಪಾಠ ಹೇಳಿಕೊಡುತ್ತಾನೋ ! ಪುಸ್ತಕದಲ್ಲಿ ಇಲ್ಲದ್ದನ್ನು ಏನು ಹೇಳಿಕೊಡುತ್ತಾನೆ, ಬದನೇಕಾಯಿ ? ಪುಸ್ತಕದಲ್ಲಿ ಇರುವುದನ್ನು ಇವನು ಹೇಳಿಕೊಡುವುದೇನು ಬಂತು, ಇವನ ಅಜ್ಜಿಯ ತಲೆ ? ಇನ್ನೂ ನಮ್ಮ ಕನ್ನಡ ಮುನಷಿಗಳಿದ್ದಾರೆ, ಪದ್ಯಕ್ಕೆ ಅರ್ಥವನ್ನು ಹೇಳಿಕೊಡುತ್ತಾರೆ. ಕಷ್ಟವಾದ ಲೆಕ್ಕಗಳನ್ನು ಹೇಳಿಕೊಡಬೇಕು, ಉರು ಹಚ್ಚಿಸುವುದಕ್ಕಾಗುವುದಿಲ್ಲ. ಉರು ಹಾಕಿಸುವುದನ್ನ ಉರುಹಾಕಿಸಲೇಬೇಕು, ಹೇಳಿಕೊಡುವುದನ್ನು ಹೇಳಿಕೊಡಲೇಬೇಕು. ಹುಡುಗರಿಗೆ ವಿವರಿಸಿ ಹೇಳಿಕೊಡಬೇಕಾದ್ದು ಹಾಗವಾದರೆ, ಉರು

ಹಚ್ಚಿಸಬೇಕಾದ್ದು ಮುಪ್ಪಾಗ. ಈ ಪರಿಜ್ಞಾನ ಇಲ್ಲದವ ಅವ ಮೇಷ್ಟನೇ ?...."
ಎಂದು ತಾವು ಕೇಳಿದ ಗಾಳಿಸುದ್ದಿಗೆ ಪ್ರತಿಯಾಗಿ ಈ ವಾಯುವ್ಯಾಸ್ತ್ರವನ್ನು ಎಸೆದರಂತೆ. ಇದು 'ಆ ಮೇಷ್ಟ್ರಿಗೆ' ತಗುಲಿತೋ ಇಲ್ಲವೋ ನಾ ಕಾಣೆ.

ರಾಮರಾಯರು ಕೇಳಿದ ಪ್ರಶ್ನೆಗೆ ಉತ್ತರ ಹೇಳದೆ ಹೋದರೆ, ಒಂದು ಪ್ರಶ್ನೆಗೆ ಒಂದು ಏಟಿನಂತೆ ಹೊಡೆತ ಸಿದ್ಧವಷ್ಟೆ. "ಮನೆಯಲ್ಲಿ ನೀವು ಓದೋದಿಲ್ಲ ಅಂತ ಕಾಣುತ್ತೆ. ಮನೆಯಲ್ಲಿ ನಿಮಗೆ ಅಂಕೆ ಶಿಕ್ಷೆ ಸಾಲದು. ನಮ್ಮ ಮನೆಗೆ ಬನ್ನಿ, ಚೆನ್ನಾಗಿ ಓದಿಸುತೀನಿ. ನನಗೇನು ದುಡ್ಡುಕಾಸು ಕೊಡಬೇಡಿ" ಎಂದು ಖಾಯಮ್ಮಾಗಿ ಏಟು ತಿನ್ನುತ್ತಿದ್ದ ವಿದ್ಯಾರ್ಥಿಗಳನ್ನು ಆಹ್ವಾನಿಸಿ, ಮನೆಗೆ ಬರಮಾಡಿಕೊಳ್ಳುತ್ತಿದ್ದರು. ಒಬ್ಬ ಒಂದು ತಿಂಗಳು ಅವರ ಮನೆಯಲ್ಲಿ 'ಒರಲಿದ'ಮೇಲೆ, "ನಿಮ್ಮ ತಂದೆಗೆ ಏನು ಕೆಲಸವೋ ?" ಎಂದು ಅವನನ್ನ ಪ್ರಶ್ನಿಸುವರು.

"ನಮ್ಮ ತಂದೆ ಬೇಳೆ ವ್ಯಾಪಾರ ಮಾಡ್ತಾರೆ ಸಾರ್?" ಅವನ ಉತ್ತರ.

"ಬೇಳೇ ವ್ಯಾಪಾರ ಸರಿ. ನವಗ್ರಹದ ಬೇಳೇಲಿ ಯಾವ ಬೇಳೇನೋ?"

ಏನೋ ಗ್ರಹಚಾರ ವಕ್ರಿಸಿತು ಎಂದು ವಿದ್ಯಾರ್ಥಿ ತಬ್ಬಿಬ್ಬಾಗಿ, "ನವಗ್ರಹಗಳು ಒಂಬತ್ತು ಸಾರ್. ಸೂರ್ಯ, ಚಂದ್ರ, ಮಂಗಳ,........"ಎಂದು ಕಕ್ಕಿಯೇ ಬಿಟ್ಟ, ತಾನು ಹಿಂದಿನ ದಿನ ಉರುಹಚ್ಚಿ ಹೊಟ್ಟೆಗೆ ಗಿಡಿದುಕೊಂಡಿದ್ದ ನವ ವಿಷಯವನ್ನ.

"ಲೋ, ಬೃಹಸ್ಪತಿ ! ನವಗ್ರಹಗಳು ಎಷ್ಟು ಅಂತ ಕೇಳಲಿಲ್ಲ ನಿನ್ನ. ತೊಗರಿಬೇಳೆ, ಹೆಸರುಬೇಳೆ, ಉದ್ದಿನಬೇಳೆ, ಅವರೆಬೇಳೆ, ಕಡಲೆಬೇಳೆ ಇವುಗಳಲ್ಲಿ ಯಾವದನ್ನ ಮಾರ್ತಾರೆ ಅಂತ ಕೇಳಿದೆ, ಗೊತ್ತಾಯ್ತೆ ?"

"ತೊಗರಿಬೇಳೆ ಸಾರ್."

"ಹಾಗಾದರೆ ನೀವು ಕುಂಚಟಿಗರು."

"ಹೌದು ಸಾರ್."

"ನಿಮ್ಮಪ್ಪನಿಗೆ ಹೇಳಿ, ಒಂದು ಐದು ಸೇರು ಬೇಳೆ ತಂದುಕೊಡೋ. ಹೇಗೆ ಬೇಯುತ್ತೆ ನೋಡೋಣ."

ಐದಲ್ಲ, ಹತ್ತು ಸೇರು ಬೇಳೆ ಹೊತ್ತು ತಂದುಹಾಕಿದ ಆ ಬೃಹಸ್ಪತಿ. ಒಳ್ಳೆಯ ಹಸನಾದ ಬೇಳೆ. ಆಗಿನ ಧಾರಣೆಯಲ್ಲಿ ರೂಪಾಯಿಗೆ ಐದು ಸೇರು.

ಹೀಗೆ ಬಂದು ಬೀಳುತ್ತಿತ್ತು, ಉಪ್ಪು ಸಾಸಿವೆ ಎರಡು ಬಿಟ್ಟು ಉಳಿದೆಲ್ಲ ಪಾಕಸಾಮಗ್ರಿ, ಗುರುದಕ್ಷಿಣೆಯ ರೂಪದಲ್ಲಿ. ನಮ್ಮಂಥ ಹಾರುವ ಹೈಕಳು ಏನು ಕೊಡೋಣ ಸಾಮಗ್ರಿಯನ್ನ ? "ನಿಮ್ಮಪ್ಪ ನಿಮ್ಮಜ್ಜನ ತಿಥೀಲಿ

ಬ್ರಾಹ್ಮಣಂಗೆ ಪಾವಲಿಗೆ ಕಡಮೆ ದಕ್ಷಿಣೆ ಕೊಡುತ್ತಾರೇನೋ? ಬ್ರಾಹ್ಮಣಾರ್ಥದ ದಕ್ಷಿಣೆಗಿಂತ ಕೀಳೆ ಗುರುದಕ್ಷಿಣೆ? ಪಾವಲಿ ತಂದುಕೊಡ್ರೊ, ಸಾಕು"— ಎಂದು ಕನಿಷ್ಠ ಪ್ರಮಾಣದ ಫೀಜನ್ನು ಗೊತ್ತು ಮಾಡಿಬಿಟ್ಟಿದ್ದರು ರಾಮ ರಾಯರು, ಹಾರುವ ಶಿಷ್ಯಂದಿರಿಗೆ.

ನಮ್ಮ ಗುಂಡಪ್ಪನಿಗೆ ನಾನು ಈ ನಾಲ್ಕಾಣೆ ಕೊಡುವುದೂ ಇಷ್ಟವಿರ ಲಿಲ್ಲ. "ದೊಡ್ಡಿಯಲ್ಲಿ ದನಕ್ಕೆ ನಾಲ್ಕಾಣೆ ವಸೂಲು ಮಾಡುವ ಹಾಗೆ ರಾಮ ರಾಯನೂ ವಸೂಲು ಮಾಡ್ತಾನೆ. ದೊಡ್ಡಿಯವರಾದರೂ ವಾಸಿ, ದನಕ್ಕೆ ಸ್ವಲ್ಪ ಹುಲ್ಲು ನೀರು ಇಡುತ್ತಾರೆ. ಅವನ ಮನೆಯಲ್ಲಿ ಕುಳಿತು ಅರಚಿ ಕೊಳ್ಳುವುದಕ್ಕೆ ನಾಲ್ಕಾಣೆ ಬಾಡಿಗೆಯೇ?" ಎಂದು ಗುಂಡಪ್ಪನ ಪ್ರಶ್ನೆ. "ಹೌದು ಮತ್ತೆ. ಮನೆಯಲ್ಲಿ ಅರಚಿಕೊಳ್ಳಿರೋ ಅಂತ ಬಡಕೊಂಡರೂ ಕೇಳುವು ದಿಲ್ಲವಲ್ಲ ನಮ್ಮ ಹುಡುಗರು? ಇವು ಅರಚಿಕೊಳ್ಳುವ ಹಾಗೆ ಕಾವಲುಕಾಯು ತ್ತಾರಲ್ಲ, ಅದಕ್ಕಾದರೂ ಕೊಡಬೇಡನೆ ನಾಲ್ಕಾಣೆಯನ್ನ? ದನ ಕಾಯುವವ ನಿಗೆ ನಾಲ್ಕಾಣೆ ಕೊಡುವುದಿಲ್ಲವೆ ತಿಂಗಳಿಗೆ, ನಿಮ್ಮ ವೆಂಕಟರಮಣಯ್ಯ?" ಎಂದು ಸುಬ್ಬಣ್ಣ ರಾಮರಾಯರ ಪರ ವಕಾಲತ್ತು ವಹಿಸುತ್ತಲೇ ಅವರನ್ನು ಕುರುಬನಿಗೂ ಗೊಲ್ಲನಿಗೂ ಸಮಮಾಡಿಬಿಟ್ಟಿದ್ದರು!

ವಾಸ್ತವವಾಗಿ, ರಾಮರಾಯರು ತಮ್ಮ ಮನೆಯಲ್ಲಿ ಪಾಠಕ್ಕೆಂದು ನೆರೆ ಯುತ್ತಿದ್ದ ೫೦-೬೦ ಮಂದಿ ವಿದ್ಯಾರ್ಥಿಗಳ ಸಂಬಂಧದಲ್ಲಿ ನಡೆದುಕೊಳ್ಳುತ್ತಿದ್ದ ರೀತಿಯಾದರೂ ಅದೇ: ಕುರುಬಕಾವಲು, ಗೊಲ್ಲಕಾವಲು. ಅಷ್ಟು ಮಂದಿ ವಿದ್ಯಾರ್ಥಿಗಳೂ ಹಜಾರದಲ್ಲಿ ಕುಳಿತು ತಮ್ಮ ತಮ್ಮ ಪಾಠಗಳನ್ನು ಗಟ್ಟಿಮಾಡು ತ್ತಿದ್ದರು. ಕೆಲವರು ಭೂಗೋಳ, ಕೆಲವರು ಚರಿತ್ರೆ, ಕೆಲವರು ಇಂಗ್ಲಿಷ್ ಸ್ಪೆಲ್ಲಿಂಗ್ ಮತ್ತು ವ್ಯಾಕರಣ, ಕೆಲವರು ಇಂಗ್ಲಿಷ್ ಮತ್ತು ಕನ್ನಡ ಪದ್ಯ, ಇತ್ಯಾದಿ ಇತ್ಯಾದಿ. ಹೀಗೆ ವಿವಿಧ ವಿಷಯಗಳನ್ನು ವಿವಿಧ ಕಂಠಗಳಲ್ಲಿ ವಿವಿಧ ಸ್ಥಾಯಿಗಳಲ್ಲಿ ಗಟ್ಟಿಮಾಡುತ್ತಿದ್ದುದರ ಪರಿಣಾಮವಾದ ಶಬ್ದ ಪ್ರಪಂಚವನ್ನು ಗುಂಡಪ್ಪ ಔದಾರ್ಯದಿಂದ ವೇದಘೋಷಕ್ಕೆ ಹೋಲಿಸಿದರೆ, ಸುಬ್ಬಣ್ಣ ಮಳೆ ಗಾಲದ ಕಪ್ಪೆಗಳ 'ಕಾನ್‌ಫರೆನ್ಸಿ'ಗೆ ಹೋಲಿಸುತ್ತಿದ್ದ. ವಿದ್ಯಾರ್ಥಿಗಳ ಈ ಪಾಠಘೋಷ ಅಥವಾ ಕಂಠಶೋಷ ಸಾಗುತ್ತಿದ್ದಾಗ ರಾಮರಾಯರು ತಮ್ಮ ಪೂರ್ವೋಕ್ತ ವಿವಸ್ತ್ರವೇಷದಲ್ಲಿ ಅಡಿಗೆಯ ಮನೆಯಿಂದ ಹಜಾರಕ್ಕೂ ಹಜಾರ ದಿಂದ ಅಡಿಗೆಯ ಮನೆಗೂ ಸೌಟನ್ನೋ, ಕಡೆಗೋಲನ್ನೋ, ಊಮಗೋಳವೆ ಯನ್ನೋ, ಇಲ್ಲವೆ ಸಿಬರುಸಿಬರಾದ ಸೀಳು ಸೌದೆಯ ತುಂಡನ್ನೋ (ಬಲಗೈಲೋ

ಎಡಗೈಲೋ) ಹಿಡಿದುಕೊಂಡು, ತಮ್ಮ ವಿದ್ಯಾರ್ಥಿಗಳಲ್ಲಿ ಪ್ರತಿಯೊಬ್ಬನೂ ತನ್ನ ತನ್ನ ಪಾಠವನ್ನು ಗಟ್ಟಿಮಾಡುತ್ತಿರುವನೋ ಇಲ್ಲವೋ ಎಂದು ಕಣ್ಣಿಡಲು 'ಲಾಳಿ ಯಾಡು'ತ್ತಿದ್ದರು. ತನ್ನ ನೂರಾರು ಕುರಿಗಳ ಮಂದೆಯಲ್ಲಿ ಒಂದು ತಪ್ಪಿಸಿ ಕೊಂಡರೂ ಕುರುಬ ಹೇಗೆ ಪತ್ತೆಹಚ್ಚಿಬಿಡುವನೋ ಹಾಗೆಯೇ ರಾಮರಾಯರೂ ಕೂಡ, ಅನ್ಯಮನಸ್ಕನಾಗಿಯೋ ಆಯಾಸದಿಂದಲೋ ಪಾಠ ಗಟ್ಟಿಮಾಡದೆ ಕುಳಿತಿರುತ್ತಿದ್ದ ವಿದ್ಯಾರ್ಥಿಯನ್ನು ಕಿವಿಯಿಂದಲೇ ಕಂಡುಹಿಡಿದುಬಿಡುತ್ತಿದ್ದರು. "ಲೋ, ಸುಬ್ಬಣ್ಣ! ಯಾಕೋ ಬಾಯಿಮುಚ್ಚಿಕೊಂಡು ಕೂತುಬಿಟ್ಟೆ? ಬೇಕೋ ಕಟ್ಟಿಗೆ ಏಟು?" ಎಂದು ಜಬ್ಬರಿಸಿದರೆ ಸಾಕು, ಕಂಠಸಮ್ಮೇಳನದಲ್ಲಿ ಲೋಪವಾಗಿದ್ದ ಕಂಠ ಮತ್ತೆ ಕೂಡಿಕೊಳ್ಳುತ್ತಿತ್ತು. ಮೇಲೆ ಹೇಳಿದ ಪಾಕೋಪ ಕರಣಗಳಲ್ಲದೆ ಉಪ್ಪು, ಹುಣಿಸೆಹಣ್ಣು, ಮೆಣಸಿನಪುಡಿ ಮುಂತಾದ ಪಾಕ ಸಾಮಗ್ರಿಗಳೂ ರಾಮರಾಯರ ಹಸ್ತಭೂಷಣಗಳಾಗಿರುತ್ತಿದ್ದುವು. ಬಹು ವಿರಳವಾಗಿ, ಅನಪಾಯಕಾರಿಯಾಗಿ, ಇವೆಲ್ಲ ಈ ಗುರುಭಯಂಕರರ ಶಿಕ್ಷಾದಂಡ ಗಳಾಗಿ ಪರಿಣಮಿಸಿದ ಸಂದರ್ಭಗಳೂ ಉಂಟು. "ಏನೋ, ಓದುತಾ ಓದು ತಾನೆ ಕಣ್ಸನ್ನೆ ಮಾಡ್ತಿ ಪಕ್ಕದೋನಿಗೆ, ಬೀದಿ ಬಸವಿ ಹಾಗೆ? ಕಣ್ಣಿಗೆ ಮೆಣಸಿನಪುಡಿ ಹಾಕಿಬಿಡುತೀನಿ, ನೋಡು" ಎಂದು ಅದನ್ನು ಹಾಕದೆಯೇ, ನಿರಪರಾಧಿ ಶಿಷ್ಯನೊಬ್ಬನ ಮುಖದ ಮುಂದೆ ಹಿಡಿಯಲ್ಲಿದ್ದ ಮೆಣಸಿನಪುಡಿಯನ್ನು ಹಿಡಿದಿದ್ದರು ಅವರು, ಒಮ್ಮೆ. ಅವನಿಗೆ ಮೆಳ್ಳೆಗಣ್ಣು ಎಂಬ ಸಂಗತಿ ಆಮೇಲೆ ತಿಳಿದಾಗ, ತುಂಬ ಪರಿತಾಪಪಟ್ಟರು. ಇಂತಹ ಸಂದರ್ಭಗಳು ಹಲವು. ಜನಿವಾರದ ಬ್ರಹ್ಮಗಂಟನ್ನು ಬೆರಳಸಂದಿಯಲ್ಲಿ ಹಿಡಿದು, ಗಾಯತ್ರೀಜಪ ಮಾಡುತ್ತಲೇ ಹೊರಗೆ ಬಂದು ಬಿಡುತ್ತಿದ್ದರು ಒಮ್ಮೊಮ್ಮೆ. "ಓದಿರೋ, ಓದಿರೋ, ಇನ್ನೂ ಗಟ್ಟಿಯಾಗಿ ಓದಿರೋ! ಕೂಗಿದರೇನೇ ಸರಸ್ವತಿ ಹತ್ತಿ ರಕ್ಕೆ ಬರೋದು, ಮೌನವಾಗಿದ್ದರೆ ಮೂರುಮೈಲಿ ಆಚೆ ಅವಳು. ಹರಿದಾಡೋ ಮಂಗಮನಸ್ಸನ್ನ ಗಟ್ಟಿಯಾಗಿ ಪಾಠದ ಗೂಟಕ್ಕೆ ಬಿಗಿಯಬೇಕಾದರೆ ಗಟ್ಟಿ ಯಾಗೇ ಒರಲಬೇಕು ಕಣ್ರೋ. ಗಟ್ಟಿಯಾಗಿ ಓದಿರೋ, ಇನ್ನೂ ಗಟ್ಟಿಯಾಗಿ ಓದಿರೋ. ನನ್ನ ಹಾಗೆ ಗಾಯತ್ರಿ ಜಪ ಮಾಡಬೇಡಿರೋ" ಎಂದು ತಮ್ಮ ಶಿಷ್ಯವೃಂದಕ್ಕೆ ಅಲವತ್ತು ನುಡಿದು, ಒಳಕ್ಕೆ ಹಿಂದಿರುಗುತ್ತಿದ್ದರು.

"ಗಟ್ಟಿಯಾಗಿ ಓದಿರೋ, ಗಟ್ಟಿಯಾಗಿ ಓದಿರೋ...."

ಒಂದು ದಿನ, ಹೊಗೆಕಟ್ಟಿಕೊಂಡು ಉರಿಯದೆ ಇದ್ದ ಅವರ ಬಚ್ಚಲ ಮನೆಯ ಒಲೆಯನ್ನು ಊದಿ ಉರಿಸುವ ಗೌರವ ನನಗೆ ಲಭಿಸಿತ್ತು. ಹಾಗೆ

ಬಚ್ಚಲುಮನೆಯಲ್ಲಿ ಉರಿ ಮಾಡುತ್ತಿದ್ದಾಗ ರಾಮರಾಯರು ಮತ್ತು ಅವರ ಪತ್ನಿ ಪದ್ಮಾವತಮ್ಮನವರ ನಡುವೆ ನಡೆಯುತ್ತಿದ್ದ ಸಂಭಾಷಣೆ ನನ್ನ ಕಿವಿಗೆ ಬಿದ್ದಿತು :

"ಗಟ್ಟಿಯಾಗಿ ಓದಿರೋ ಗಟ್ಟಿಯಾಗಿ ಓದಿರೋ ಅಂತ ಹುಡುಗರನ್ನ ಯಾಕೆ ಗೋಳುಹುಯ್ದುಕೊಳ್ಳುತ್ತೀರಿ ? ಸುಮ್ಮನೆ ಕಪ್ಪೆ ವಟಗುಟ್ಟಿದ ಹಾಗೆ ವಟಗುಟ್ಟುತ್ತವೆ. ನನಗೋ, ಆ ಸಾಮಗಾನ ಕೇಳಿದರೆ ತಲೆ ಸಿಡಿಯುವ ಹಾಗೆ ಆಗುತ್ತೆ...."

"ನಾನು ಏನು ಮಾಡಲಿ ಹೇಳು. ಆ ಮುಂಡೇವು ಹಾಗೆ ಒರಲದೆ ಹೋದರೆ ಅವುಗಳ ತಲೆಗೆ ಹತ್ತುವುದೇ ಇಲ್ಲ."

"ಪಾಠ ತಲೆಗೆ ಹತ್ತದ ಜಾತಿಯಲ್ಲದ ಜಾತಿಯವರ ಮಕ್ಕಳನ್ನೆಲ್ಲ ಯಾಕೆ ಗುಡ್ಡೆ ಹಾಕಿಕೊಳ್ಳಬೇಕು ? ಒಂದು ನಾಲ್ಕುಜನ ಬ್ರಾಹ್ಮಣರ ಮಕ್ಕಳಿಗೆ ಪಾಠ ಹೇಳಿದರೆ ಆಯಿತು ?"

"ಬ್ರಾಹ್ಮಣರ ಮಕ್ಕಳೆಲ್ಲ ಪಾಠಕ್ಕೆಲ್ಲಿ ಬರುತ್ತಾರೆ ? ಬಂದರೂ ಕೊಡ ಬೇಕಾದ ನಾಲ್ಕಾಣೆಯನ್ನೋ ಎಂಟಾಣೆಯನ್ನೋ ಸಲೀಸಾಗಿ ಕೊಡುತ್ತಾರೆಯೇ ಅವರು ? ಇತರಾದಿಗಳು ತಮ್ಮ ಮಕ್ಕಳನ್ನು ಓದಿಸಿ ಮುಂದಕ್ಕೆ ತರಬೇಕು ಅಂತ ಆಸೆ ತುಂಬಿಕೊಂಡಿದ್ದಾರೆ. ನಾಲ್ಕಾಣೆ ಕೇಳಿದರೆ ಎಂಟಾಣೆ ಕೊಡುತ್ತಾರೆ. ಕೈಲಿ ಕಾಸಿಲ್ಲವೋ, ಏನಾದರೂ ಸಾಮಾನು ತಂದುಹಾಕಿಬಿಡುತ್ತಾರೆ...."

"ಅದು ಸರಿ ಅಂದ್ರೆ, ಹೊಲೆಮಾದಿಗರು ಹಜಾಮರು ಇವರ ಮಕ್ಕಳಿಗೆಲ್ಲ ಪಾಠ ಹೇಳುವುದೇ ? ಅವರ ಮೈಲಿಗೆಯೆಲ್ಲ ನಮಗೆ ಬೆರೆಯುವುದಿಲ್ಲವೆ ?"

"ನೋಡು, ವಿದ್ಯಾದಾನ ಮಾಡುವಾಗ ಆ ಜಾತಿ ಈ ಜಾತಿ ಅಂತ ನೋಡಬಾರದು. ವಿದ್ಯೆ ಜ್ಞಾನ ಅಂದರೆ ಬೆಳಕು. ಸೂರ್ಯನ ಬಿಸಿಲು ಗಂಗೆಯ ಮೇಲೂ ಬೀಳುತ್ತೆ, ಚರಂಡಿ ನೀರಿನಮೇಲೂ ಬೀಳುತ್ತೆ. ಮನೆಯ ಲ್ಲೇನೋ ನಾವು ಅವರನ್ನ ಸೇರಿಸದೆ ಇರಬಹುದು. ಅವರೆಲ್ಲ ಸ್ಕೂಲಿಗೂ ಬರು ತ್ತಾರಲ್ಲ ? ಅಲ್ಲಿ ಮೈಲಿಗೆ ಆಗುವುದಿಲ್ಲವೆ ?"

"ಮನೆಗೂ ಸ್ಕೂಲಿಗೂ ವ್ಯತ್ಯಾಸವೇ ಇಲ್ಲವೆ ?"

"ಇಲ್ಲ ಎಂದವರು ಯಾರು ? ಪುಟ್ಟಯ್ಯನ ಮಗನನ್ನ ಹಜಾರದ ಒಂದು ಮೂಲೆಯಲ್ಲಿ ಪ್ರತ್ಯೇಕವಾಗಿ ಕೂರಿಸುತ್ತೇನೆ. ಮುಂಚಿಯ ಮಗನನ್ನ ಜಗಲಿಯ ಮೇಲೆ ಕೂರಿಸುತ್ತೇನೆ...."

"ನೆರೆಹೊರೆಯವರೆಲ್ಲ ಇದನ್ನ ಕೂಲಿಮಠ, ದೊಡ್ಡಿ, ಅಂತ ಹಾಸ್ಯ ಮಾಡುತ್ತಾರಂತೆ. ಅತ್ತಲಾಗಿ ಈ ಪಾಠ ಹೇಳುವುದನ್ನ ಬಿಟ್ಟುಬಿಡಬಾರದೆ ? ಇವರಿಂದ ಆಗುವ ಉತ್ಪತ್ತಿ ಅಷ್ಟರಲ್ಲಿಯೇ, ಇದೆ."

"ಇದನ್ನು ಬಿಟ್ಟು, ಬರಿಯ ಸಂಬಳದಿಂದ ಏನು ಮಾಡುವುದಕ್ಕಾಗುತ್ತೆ? ನಿನ್ನ ಪಥ್ಯಪಾನಕ್ಕೆ ಹಣ ಎಲ್ಲಿಂದ ತರಲಿ ?...."

"ನೀವು ಪಥ್ಯಪಾನ ಅಂತ ನನ್ನ ಆರೈಕೆ ಮಾಡುತ್ತೀರಿ, ಇನ್ನು ಹತ್ತು ವರ್ಷ ಆದರೂ ನನ್ನ ಆಯುಸ್ಸು ಗಟ್ಟಿ. ನನ್ನ ಗತಿಗೆ ನನ್ನನ್ನ ಬಿಟ್ಟರೆ, ಬೇಗ ದೇವರ ಪಾದ ಸೇರಿಕೊಳ್ಳುತ್ತೇನೆ. ನೀವೂ ಇನ್ನೊಂದು ಮದುವೆಮಾಡಿ ಕೊಂಡು, ವಂಶದ ಏಳಿಗೆಯಾಗೋದನ್ನ ನೋಡಬೇಕು...."

"ಥೂ, ಎಂಥ ಮಾತು ಆಡ್ತಿ, ಬಿಡುತು ಅನ್ನು...."

ಇಷ್ಟು ಹೊತ್ತಿಗೆ, ಬಚ್ಚಲಮನೆಯ ಒಲೆ ಹೊತ್ತಿಕೊಂಡು, ಹೊಗೆಯೆಲ್ಲ ಮಾಯವಾಗಿ, ಸೌದೆ ಚೆನ್ನಾಗಿ ಉರಿಯತೊಡಗಿತ್ತು. ನಾನು ಹೊರಕ್ಕೆ ಬಂದುಬಿಟ್ಟೆ. ಬಹುಶಃ ಗಂಡಹೆಂಡಿರ ಮಾತುಕತೆ ಅಷ್ಟಕ್ಕೇ ನಿಂತಿರಬೇಕು.

ಅದು ಹೇಗಾದರೂ ಇರಲಿ. ನನ್ನ ವಿದ್ಯಾರ್ಥಿದಶೆ ಮುಗಿದು, ನಾನು ಉದ್ಯೋಗಾರ್ಥಿಯಾಗಿ ಬೆಂಗಳೂರಿಗೆ ಬರುವವರೆಗೂ ರಾಮುರಾಯರ 'ಮನೆ ಸ್ಕೂಲು' ವರ್ಷವರ್ಷಕ್ಕೆ ಅಭಿವೃದ್ಧಿಗೊಂಡು ನಡೆದುಬರುತ್ತಿತ್ತು. ಅವರ ನೇತೃತ್ವದಲ್ಲಿ ಎಂದರೆ ಕಣ್ಣು ಬೆದರಿಕೆಯಲ್ಲಿ ಪಾಠಗಳನ್ನು 'ಸಂತೆ' ಹಾಕಿದ ಯಾವ ವಿದ್ಯಾರ್ಥಿಯೂ ಲೋವರ್ ಸೆಕೆಂಡರಿ ಪರೀಕ್ಷೆಯಲ್ಲಿ ಫೇಲಾದುದಿಲ್ಲ. ಹತ್ತು ಹದಿನೈದು ವರ್ಷಗಳ ಆ ಅವಧಿಯಲ್ಲಿ ರಾಮುರಾಯರ ಪತ್ನಿ ಕ್ಷಯರೋಗ ವಿಮುಕ್ತಳಾಗಿ, ಮೂವರು ಗಂಡುಮಕ್ಕಳನ್ನು ಹಡೆದು, ನಗುನಗುತ್ತ ಅವು ಗಳನ್ನು ಎತ್ತಿಕೊಂಡು ಬೀದಿಯಲ್ಲಿ ಬರುತ್ತಿದ್ದುದನ್ನು ನಾನು ಕಂಡಿದ್ದೇನೆ. ಅಷ್ಟೇ ಅಲ್ಲ. ಆ ಮೂವರು ಗಂಡುಮಕ್ಕಳಿಗೂ ಮೂರು ನಾಡುಹೆಂಚಿನ ಮನೆ ಗಳನ್ನೂ ಕಟ್ಟಿಸಿಬಿಟ್ಟರು, ನಾನು ಕಂಡಂತೆ. ಅವು ರಾಮುರಾಯರಿಗೆ ಬಾಡಿಗೆ ಯನ್ನೂ ದುಡಿಯತೊಡಗಿದವು.

ನಮ್ಮ ತಂದೆ ನನ್ನ ಮುಂಜಿಯ ಲಗ್ನ ಕಟ್ಟಿಸುವುದಕ್ಕೆ ಜಗಲಿ ಜೋಯಿ ಸರ ಮನೆಗೆ ಹೋಗಿದ್ದರು. ಆಗ ಅಲ್ಲಿಯೇ ಇದ್ದ ನಾಟಕದ ಸುಬ್ಬಣ್ಣ ಗುಂಡಪ್ಪ ನೊಂದಿಗೆ ಹೀಗೆ ನುಡಿದರು :

"ನೋಡಿದೆಯಾ ಗುಂಡಪ್ಪ. ಆನೇಕಾಲ್ ರಾಮುರಾಯರು ಶಾನೆ ಬುದ್ಧಿ ವಂತರು ; ಅದು ಹೇಗೆ ಬಡಕಾಯಿಸಿಕೊಂಡರು ! ಶಾಮುರಾಯನ ಹಾಗೆ ನಾಟಕದ ಕಂಪೆನಿ ಕಟ್ಟಿ ಪಾಪರಾಗೋದಕ್ಕಿಂತ ಮಕ್ಕಳಿಗೆ ಪಾಠ ಹೇಳುವುದು ಮೇಲು ; ಇಹಕ್ಕುಂಟು ಪರಕ್ಕುಂಟು. ಶಾಮುರಾಯನ ಬಂಗಲಿ ಇನ್ನೂ ಪಾಯಬಿಟ್ಟು ಮೇಲಕ್ಕೆದ್ದಿಲ್ಲ ; ನಮ್ಮ ರಾಮುರಾಯರು ಕಟ್ಟಿಸಿಯೇಬಿಟ್ಟರು ಮನೆಗಳನ್ನ, ಒಂದಲ್ಲ ಎರಡಲ್ಲ ಮೂರು. ಒಳ್ಳೇ ಸಾಹಸವಂತರು."

"ಸಾಹಸ ಏನು ಸಾಹಸ, ಅದೃಷ್ಟವಂತರು."

"ಅಸು ದಿಟ, ಗುಂಡಪ್ಪ. ರಾಮರಾಯ ವೈಷ್ಣವನಾದರೂ ಗೊಡ್ಡು ಸಂಪ್ರದಾಯಸ್ಥನಲ್ಲ. ತನ್ನ ಹೆಂಡತಿಯ ಕಾಯಿಲೆಯ ಸಂಬಂಧದಲ್ಲಿ ಸ್ಮಾರ್ತ ರಂಢೀಗಂಡನಾದ ನನ್ನನ್ನ ಜ್ಯೋತಿಷ್ಯ ಕೇಳುವುದಕ್ಕೆ ಬಂದಿದ್ದ. ನಾನು ಹೇಳಿದ್ದೆಲ್ಲ ನಿಜವಾಯಿತು. ಆತನಿಗೆ ಈಗ ಶುಕ್ರದಶೆ ನಡೀತಾ ಇದೆ" ಎಂದು ವೃದ್ಧ ಜಗಲಿ ಜೋಯಿಸರು ಗುಂಡಪ್ಪನ ಅಭಿಪ್ರಾಯವನ್ನು ಅನುಮೋದಿಸಿ, "ರಾಕ್ಷಸಗಣದ ರಾಮರಾಯ ಮೊದಲಿನಹಾಗೆಯೇ ಹುಡುಗರನ್ನು ಗೋಳು ಹುಯ್ದುಕೊಳ್ಳುತ್ತಾನೆಯೋ ?" ಎಂದು ನನ್ನ ತಂದೆಯ ಕಡೆ ತಿರುಗಿ, ಪ್ರಶ್ನಿಸಿದರು.

ನನ್ನ ತಂದೆಯ ಪರವಾಗಿ ಗುಂಡಪ್ಪನೇ ಉತ್ತರ ಕೊಟ್ಟ :

"ಹುಟ್ಟುಗುಣ ಎಲ್ಲಿ ಹೋಗುತ್ತೆ ? ರಾಕ್ಷಸಹುಟ್ಟು. ಅದಕ್ಕೆ ತಾನೆ ನಮ್ಮ ವೆಂಕಟರಮಣಯ್ಯನಿಗೆ ಹೇಳಿ ರಾಮು ಅವರ ಮನೆಗೆ ಪಾಠಕ್ಕೆ ಹೋಗುವುದನ್ನು ತಪ್ಪಿಸಿದ್ದು ? ಆದರೆ ನನಗೆ ಒಂದು ಆಶ್ಚರ್ಯ ಏನೂ ಅಂದರೆ, ಅಷ್ಟೊಂದು ಏಟು ತಿಂದರೂ ಹುಡುಗರೆಲ್ಲ ದೀಪದ ಹುಳು ದೀಪಕ್ಕೆ ಮುತ್ತಿಕೊಳ್ಳುವ ಹಾಗೆ ಅವರ ಮನೆಗೆ ಮುತ್ತಿಕೊಳ್ಳುತ್ತಾರಲ್ಲ, ಅದೀಗ ಆಶ್ಚರ್ಯ !"

"ಪಾಠ ಅಷ್ಟು ಚೆನ್ನಾಗಿ ಹೇಳಿಕೊಡುತಾರೆ ಅಂತ ಕಾಣುತ್ತೆ ?" ಎಂದು ಜಗಲಿ ಜೋಯಿಸರು ಸಂದೇಹಾಸ್ಪದವಾದ ಮೆಚ್ಚಿಗೆನುಡಿಯಾಡಿದರು.

"ಚೆನ್ನಾಗಿ ಹೇಳಿಕೊಡುವುದೇನು ಬಂತು, ಜನ್ಮಜನ್ಮೇಪಿ ಮರೆಯದಹಾಗೆ ಪಾಠಗಳನ್ನು 'ಸಂತೆ' ಹಾಕಿಸುತ್ತಾರೆ, ಅಷ್ಟೆ. ನಮ್ಮ ರಾಮು ಹೇಳ್ತಾ ಇದ್ದನಲ್ಲ...." ಎಂದು ಗುಂಡಪ್ಪ ಹೇಳಿದರು.

"ಪಾಠಗಳನ್ನೂ ಮರೆಯುವುದಿಲ್ಲ, ಏಟುಗಳನ್ನೂ ಮರೆಯುವುದಿಲ್ಲ" ಎಂದು ಸುಬ್ಬಣ್ಣನವರು ಕುಹಕವಾಡಿದರು.

ಅವರಿಬ್ಬರ ಮಾತೂ ದಿಟ ಎಂದು ರಾಮರಾಯರ ಶಿಕ್ಷಣದ ಗರಡಿಗೆ ಸ್ವಲ್ಪ ಮಣ್ಣು ಹೊತ್ತುಹಾಕಿದ್ದ ನಾನು ಹೇಳಬಲ್ಲೆ. ನಾನು ಅವರ ಏಟನ್ನೂ ಮರೆತಿಲ್ಲ; ಇಂದಿಗೂ ಅವರು ಹೇಳಿಕೊಟ್ಟಷ್ಟು ಅಥವಾ 'ಓದಿಸಿ'ದಷ್ಟು ಪಾಠ ವಿಷಯಗಳನ್ನೂ ಮರೆತಿಲ್ಲ. ಅವರು ಎಷ್ಟೇ ಕ್ರೂರಿಗಳೆಂದು ಪ್ರತೀತಿಯಿದ್ದರೂ, ಸ್ವಲ್ಪಮಟ್ಟಿಗೆ ಅದು ನಿಜವಾಗಿದ್ದರೂ, ನನ್ನ ಇಂದಿನ ಭಾವನೆಯಲ್ಲಿ ಅವರ ವ್ಯಕ್ತಿಸ್ವರೂಪವೇ ಬೇರೆಯಾಗಿದೆ. ಅಂದಿನ ನೆರೆಹೊರೆಯವರ ದೃಷ್ಟಿಪಥಕ್ಕೆ ಅವರ ರಾಕ್ಷಸರೂಪ ರಾಕ್ಷಸವರ್ತನೆಗಳನ್ನು ಮಾತ್ರ ಕಾಣಗೊಡುವ ಹೆಬ್ಬಾಗಿಲು ಒಂದೇ ತೆರೆದಿತ್ತು ; ಅವರ ಪತ್ನೀಪ್ರೇಮ, ವಿಶಾಲಭಾವನೆ,

ಕರ್ತವ್ಯನಿಷ್ಠೆ, ದಂಡಿಸಿಯಾದರೂ ಶಿಷ್ಯರನ್ನು ಚೆನ್ನಾಗಿ ತಯಾರುಮಾಡಬೇಕೆಂಬ ತಗ್ಗದ ಕುಗ್ಗದ ಉತ್ಸುಕತೆ, ನಿರಾಶೆಯ ನಿಶಾನೆಯನ್ನೇ ಕೈಗೆ ಕೊಡುವ ಬದುಕಿನೊಂದಿಗೆ ಹೋರಾಡುವ ಕೆಚ್ಚು ನೆಚ್ಚು—ಇವನ್ನು ಆಗೊಮ್ಮೆ ಈಗೊಮ್ಮೆ ಕಾಣಗೊಟ್ಟ ಬೆಳಕುಕಂಡಿಗಳ ಕೆಲವು ಇಣಿಕುನೋಟಗಳು ನನಗೆ ಮಾತ್ರ ಲಭ್ಯವಾಗಿದ್ದುವು.

ರಾಮರಾಯರನ್ನು ಅಂದು ಕೇವಲ ಭಯದಿಂದ ನೆನೆಯುತ್ತಿದ್ದೆ ; ಇಂದು ಅಷ್ಟೇ ಭಕ್ತಿಯಿಂದಲೂ ನೆನೆಯುತ್ತೇನೆ.

ಇಂದಿನ ತೊಂಡಲೆಯುವ ವಿದ್ಯಾರ್ಥಿಗಳ ಅಶಿಸ್ತಿನ ಕುತ್ತಗಳಿಗೆ ಅವರ ಎಳೆಯ ವಯಸ್ಸಿನಲ್ಲಿ ದಂಡನೀತಿಯ ಅಭಾವವೇ ಕಾರಣವೇನೋ ಎಂದು ನನಗೆ ಅನ್ನಿಸುತ್ತದೆ—ರಾಮರಾಯರನ್ನು ನೆನೆದಾಗ.

# ಒಂಟಿ ಸಂಜೀವ

ನಮ್ಮ ಬೀದಿಯ ನೆರೆಹೊರೆಯವರನ್ನು ನೆನೆದಾಗ ಹಿರಿಯರೇ ನೆನಪಿಗೆ ಬರುತ್ತಾರೆ, ಯಾಕೋ ಕಾಣೆ. ಅಪವಾದ ರೂಪವಾಗಿ, ಒಬ್ಬಿಬ್ಬರು ಕಿರಿಯರು ಕೂಡ (ನನ್ನ ಸಮವಯಸ್ಕರು, ಒಡನಾಡಿಗಳು, ಸಹಪಾಠಿಗಳು) ನೆನಪಿನ ವೇದಿಕೆಯಮೇಲೆ ಸುಳಿದು ಮಾಯವಾಗುವುದುಂಟು. ಅಂಥವರಲ್ಲಿ 'ಒಂಟಿ ಸಂಜೀವ'ನೂ ಒಬ್ಬ.

ನಿಜವಾಗಿ ಅವನು ನಮ್ಮ ಬೀದಿಯವನಲ್ಲ; ಹಿಂದಿನ ಬೀದಿಯವನಲ್ಲ,ಅದರ ಹಿಂದಿನ ಬೀದಿಯವನು. ಆದರೂ, ಒಂಟಿ ಸಂಜೀವನೆಂದು ನಮ್ಮ ಬೀದಿಯಲ್ಲಿ ಪರಿಚಿತ ವ್ಯಕ್ತಿ.

ಬೇವಿನ ಸೊಪ್ಪನ್ನು 'ಸಾಧನೆ' ಮಾಡಿ ಪ್ರತಿನಿತ್ಯವೂ ಒಂದು ನಿರ್ದಿಷ್ಟ ಪ್ರಮಾಣದ ಸೊಪ್ಪನ್ನು ತಿನ್ನುತ್ತ ಬಂದರೆ ಯಾವ ಬಗೆಯ ವಿಷ ದೇಹಕ್ಕೆ ಸೇರಿದರೂ ವಿಷ ಮಾರಕವಾಗುವುದಿಲ್ಲ ಎಂದು ಯಾರೋ ಸಂಜೀವಯ್ಯನಿಗೆ ಹೇಳಿದರು.

ಸರಿ, ಬೇವಿನ ಸೊಪ್ಪಿನ ಸಾಧನೆಯನ್ನು ಮೊದಲು ಮಾಡಿಯೇ ಬಿಟ್ಟ ಸಂಜೀವಯ್ಯ. ಹೀಗೆ ಒಂದು ವರ್ಷ ಸಾಧನೆ ಮಾಡಿದನಂತೆ. ಮೊದಲನೆಯ ದಿನ ಬೇವಿನ ಚಿಗುರಿನ ಒಂದು ಎಸಳು, ಎರಡನೆಯ ದಿನ ಎರಡು ಎಸಳು, ಮೂರನೆಯ ದಿನ ಮೂರು—ಹೀಗೆ ಒಂದು ತಿಂಗಳು ಚಿಗುರಿನ ಸೇವನೆ ; ಎರಡನೆಯ ತಿಂಗಳಿಂದ ಮೊದಲ ದಿನ ಮೂವತ್ತೊಂದು ಬಲಿತ ಎಸಳು, ಎರಡನೆಯ ದಿನ ಮೂವತ್ತೆರಡು ಎಸಳು–ಹೀಗೆ ದಿನಕ್ಕೆ ಒಂದು ಎಸಳಿನಂತೆ ಹೆಚ್ಚಿಸಿ ಕೊಂಡುಹೋಗಿ ವರ್ಷದ ಕಡೆಯಲ್ಲಿ ಮುನ್ನೂರ ಅರುವತ್ತು ಎಸಳು ತಿನ್ನಬೇಕಂತೆ. ಇದನ್ನು ಊಟಕ್ಕೆ ಮೊದಲೆ ತಿನ್ನತಕ್ಕದ್ದು. ಹೀಗೆ ಒಂದು ವರ್ಷ ಸಾಧನೆ ಯಾದ ಮೇಲೆ ಮುನ್ನೂರ ಅರುವತ್ತು ಎಸಳಿಗೆ ಕಡಮೆಯಿಲ್ಲದಂತೆ ಎಷ್ಟು ಬೇಕಾದರೂ ಬೇವಿನ ಸೊಪ್ಪನ್ನು ಯಾವಾಗ ಬೇಕಾದರೂ ತಿನ್ನಬಹುದು– ಒಟ್ಟಿಗೆಯೇ ತಿನ್ನಬಹುದು ; ಇಲ್ಲವೆ ಬೆಳಗಿನಿಂದ ರಾತ್ರಿ ಮಲಗುವ ವರೆಗೆ ಎಸಳೆಸಳಾಗಿ ಮೆಲ್ಲುತ್ತಲೇ ಇರಬಹುದು.

ಸಾಧನೆಯ ಕಾಲದಲ್ಲಿ ಅವನ ಸೊಪ್ಪುಸೇವನೆ ಬಹಳ ಗೋಪ್ಯವಾಗಿತ್ತು. ಅವನ ತಂದೆ, ತಾಯಿ, ಹೆಂಡತಿ–ಇವರಿಗೆ ಕೂಡ ಗೊತ್ತಿರಲಿಲ್ಲ. ಆ ಕಾಲಾವಧಿ ಪೂರೈಸಿದ ಕೂಡಲೆ, ತನ್ನ ಅಪೂರ್ವ ಸಾಮರ್ಥ್ಯವನ್ನು ಎಲ್ಲರಿಗೂ ಪ್ರಕಟಿಸುವುದಕ್ಕಾಗಿಯೋ ಎಂಬಂತೆ, ಎಲ್ಲರೆದುರಿಗೆಯೇ ತಿನ್ನಲು ಮೊದಲು ಮಾಡಿಬಿಟ್ಟ. ಮೊದಲ ಸಲ, ಒಂದು ದಿನ ಸಂಜೀವಯ್ಯನನ್ನು ಬೀದಿಯಲ್ಲಿ ಕಂಡೆ; ಕೊಂಕುಳಲ್ಲಿ ಒಂದು ಕಂತೆ ಬೇವಿನ ಸೊಪ್ಪು–(ಯುದ್ಧಕ್ಕೆ ಮುಂಚೆ) ಒಂದಾಣೆಗೆ ಬರುವಷ್ಟು ದಂಟಿನ ಸೊಪ್ಪಿನ ಪ್ರಮಾಣದ್ದು. ಅದನ್ನು ಕಂಡು, "ಇದೇನಯ್ಯ ! ನನಗೆ ಹೇಳಲೇ ಬೇಡವೆ ? ಇವತ್ತು ಬಾಣಂತಿಗೆ ನೀರು ಅಂತ ಕಾಣುತ್ತೆ" ಎಂದೆ. "ಇಲ್ಲ" ಎಂದು ಹಲ್ಲುಕಿರಿದ. ಮನೆಯಲ್ಲಿ ಯಾರಿಗಾದರೂ 'ಅಮ್ಮ' ಎದ್ದಿದ್ದರೆ ಅವನು ಹೀಗೆ ನಗುತ್ತಿರಲಿಲ್ಲ. ಆದ್ದರಿಂದ, ಅಷ್ಟೊಂದು ಬೇವಿನಸೊಪ್ಪು ಏಕೆ ಎಂಬುದು ನನಗೆ ಹೊಳೆಯಲಿಲ್ಲ. ತಟ್ಟನೆ ಕೇಳಬಿಟ್ಟೆ : "ಒಂಟಿ ಸಾಕಿದ್ದೀಯೇನೋ ?" ಅವನು ಇನ್ನೂ ದೊಡ್ಡದಾಗಿಯೇ ಹಲ್ಲುಕಿರಿದ. ಒಂಟಿ ನಕ್ಕಹಾಗೇ ಆಯಿತು ! ಇನ್ನೊಂದು ದಿನ ಸಂಜೀವಯ್ಯ ಸೊಪ್ಪು ಮೆಲ್ಲುತ್ತಿದ್ದಾಗ ಸಿಕ್ಕಿಬಿದ್ದ. "ನನ್ನ ಊಹೆ ನಿಜವಾಯಿತು. ನಿಮ್ಮ ಮನೆಯಲ್ಲಿ ಒಂದು ಒಂಟಿ ಸಾಕಿದ್ದಾರೆ !" ಎಂದೆ. ಸಂಜೀವಯ್ಯ ನಗುವುದಕ್ಕೆ ಪ್ರಯತ್ನಪಟ್ಟ : ಬಾಯಿತುಂಬ ಬೇವಿನಸೊಪ್ಪು ! ಅಂದಿನಿಂದ ಅವನಿಗೆ 'ಒಂಟಿ ಸಂಜೀವ' ಎಂಬ ಅಡ್ಡಹೆಸರು ಗಂಟುಬಿತ್ತು : ನಾಮಕರಣಕ್ಕೆ ನಾನೇ ಪುರೋಹಿತ. (ಮೈಸೂರಿನಲ್ಲಿ ಅರಮನೆಗಾಗಿ ಸಾಕಿಕೊಂಡಿರುವ ಒಂಟೆಗಳಿಗೆ ಬೇವಿನ ಸೊಪ್ಪೇ ಮುಖ್ಯಾಹಾರ.) "ಇದೇನು ನಿನಗೆ ಹುಚ್ಚೋಗಿಚ್ಚೋ" ಎಂದು ಸಂಜೀವಯ್ಯನನ್ನು ಕೇಳಿದಾಗ ಅವನು ತನ್ನ ಸಾಧನೆಯ ಕತೆಯನ್ನು ನನಗೆ ಹೇಳಿದ ; ಅದರ ಗುಣವನ್ನೂ ಒಂದಕ್ಕೆ ನೂರಾಗಿ ಮಾಡಿ ಹೇಳಿದ. ಸಾವನ್ನು ಕೂಡ ಗೆದ್ದುಬಿಡಬಹುದೆಂದು ನಂಬಿದ್ದ, ತಾನೊಬ್ಬ ಸಿದ್ಧಪುರುಷನಾಗಿಬಿಡುವೆನೆಂದು ನಂಬಿದ್ದ, ಆ ಬಡ ಸಂಜೀವಯ್ಯ. "ನಿನಗೆ ಯಾರೋ ಇದನ್ನು ಹೇಳಿದವರು ?" ಎಂದರೆ—"ನೋಡು. ಆ ಪ್ರಶ್ನೆ ಮಾತ್ರ ಕೇಳಬೇಡ. ಯಾರೋ ಒಬ್ಬರು ; ನಿನ್ನಂಥ ಮಹಾತ್ಮರು. ಬೇಕಾದರೆ ನೀನೂ ಮಾಡು. ನಿನಗೆ ಹೇಳಿಕೊಡುತ್ತೇನೆ" ಎಂದುಬಿಡುತ್ತಿದ್ದ. ಬೇವಿನ ಸೊಪ್ಪು ತಿನ್ನುವುದನ್ನು ಹೇಳಿಕೊಡಬೇಕೆ ! ನನಗೆ ನಗು ಬಂದಿತು. ಇಷ್ಟಕ್ಕೂ ಹೇಳಿಕೊಟ್ಟರೆ ತಾನೆ ತಿನ್ನುವವರು ಯಾರು ?–ಯುಗಾದಿ ಹಬ್ಬದ ದಿನ ಬೆಲ್ಲದೊಡನೆ ಬೇವು ತಿನ್ನುವುದೇ ಕಷ್ಟವಾಗಿರುವಾಗ ?

ನನಗೆ ಬೆಂಗಳೂರಿನಲ್ಲಿ ಉದ್ಯೋಗವಾದ ಮೇಲೆ ಮೊದಲು ಒಂದೆರಡು ವರ್ಷ ಮೂರು ಮೂರು ತಿಂಗಳಿಗೆ ಮೈಸೂರಿಗೆ ಹೋಗಿ ಬರುತ್ತಿದ್ದೆ : ಹುಟ್ಟಿ ದೂರಿನಮೇಲೆ ಮಮತೆ ಹಾಗಿತ್ತು. ಬೆಂಗಳೂರು ಒಗ್ಗುತ್ತ ಬಂದ ಮೇಲೆ ಮೈಸೂರಿಗೆ ಹೋಗುವುದು ಕಡಮೆಯಾಗುತ್ತ ಬಂತು. ಆದರೂ, ವರ್ಷಕ್ಕೆ ಒಂದು ಸಲವಾದರೂ ಹೋಗುತ್ತಲೇ ಇದ್ದೆ. ವರ್ಷಕ್ಕೆ ಎರಡು ಮೂರು ಸಲ ಹೋಗುತ್ತಿದ್ದಾಗ ಯಾವಾಗಲಾದರೂ ಒಂದು ಸಲ ಸಂಜೀವಯ್ಯನ ಮನೆಗೂ ಹೋಗುತ್ತಿದ್ದೆ. ಹಾಗೆ ಒಮ್ಮೆ ಹೋದಾಗ, ಸಂಜೀವಯ್ಯ ಮನೆಯಂಗಳದಲ್ಲಿ ಒಂದು ಬೇವಿನ ಸಸಿ ನೆಡುತ್ತಿದ್ದುದನ್ನು ನೋಡಿ ನಕ್ಕು ಅವನನ್ನು ಪರಿಹಾಸ ಮಾಡಿದ್ದೆ. ವರ್ಷಕ್ಕೆ ಒಂದೇ ಸಲ ಹೋಗುವುದಕ್ಕೆ ತೊಡಗಿದ ಮೇಲೆ, ಒಟ್ಟಿಗೆ ಎರಡು ಮೂರು ವರ್ಷಗಳು ಅವನ ಮನೆಯ ಕಡೆ ಹೋಗಲು ಪುರುಸೊತ್ತೇ ಆಗಲಿಲ್ಲ. ಆ ತರುವಾಯ ಒಂದು ವರ್ಷ ಹೋದಾಗ, ಬಿಡುವು ಮಾಡಿ ಕೊಂಡು ಸಂಜೀವಯ್ಯನ ಮನೆಯ ಕಡೆ ಹೊರಟೆ.

ಬೇವಿನ ಸಸಿ ಆಗಲೇ ಎರಡಾಳೆತ್ತರದ ಮೇಲೆ ಬೆಳೆದು ಚೆನ್ನಾಗಿ ಕವ ಲೊಡೆದಿತ್ತು, ಆದರೆ, ಸಂಜೀವಯ್ಯನಿಗೆ ವರ್ಷಗಾಲವೂ ಸೊಪ್ಪು ಒದಗಿಸಿ ಕೊಡುವಷ್ಟು ದೊಡ್ಡದಾಗಿ ಬೆಳೆದಿರಲಿಲ್ಲ. ಅವನು ತನ್ನ ಗಿಡದ ಸೊಪ್ಪನ್ನೇ ಸೇವಿಸಲು ತೊಡಗಿಬಿಟ್ಟಿದ್ದರೆ ಒಂದು ವಾರದೊಳಗಾಗಿ ಗಿಡ ನುಣ್ಣಗಾಗಿ ಬಿಡುತ್ತಿತ್ತು !

ಇದನ್ನು ನೆನೆದು ತುಂಬ ನಗು ಬಂತು. ಬೇವಿನ ಗಿಡವನ್ನು ನೋಡುತ್ತ, ನಸುನಗುತ್ತಲೇ, “ಸಂಜೀವಯ್ಯ” ಎಂದು ಕೂಗಿಕೊಂಡು ಒಳಕ್ಕೆ ಹೋದೆ.

ಯಾರೂ ಉತ್ತರ ಕೊಡಲಿಲ್ಲ. ಹಜಾರದ ಸುತ್ತ ಕಣ್ಣು ಹರಿಸಿ ನೋಡಿದೆ. ಬಿಚ್ಚಿದ ಹಾಸಿಗೆಯಮೇಲೆ ಸಂಜೀವಯ್ಯನ ತಂದೆ ಕುಳಿತಿದ್ದರು. “ಸಂಜೀವಯ್ಯ ಮನೆಯಲ್ಲಿ ಇಲ್ಲ ಅಂತ ಕಾಣುತ್ತೆ. ಬೇವಿನಸೊಪ್ಪು ತರಲು ಹೋಗಿದ್ದಾನೋ ?” ಎಂದು ಕೇಳುತ್ತಲೇ ಅವರ ಹತ್ತಿರ ಹೋಗಿ ಕುಳಿತೆ. “ಯಾವಾಗ ಬಂದೆ ? ಬಾ ರಾಮು ; ಕುಳಿತುಕೋ....ಏನು ತುಂಬ ಅಪರೂಪ ವಾಗಿಬಿಟ್ಟೆಯಲ್ಲ ? ಈಗ ನಿನಗೆ ಮಕ್ಕಳೆಷ್ಟು ?......” ಮುಂತಾಗಿ ಕೇಳ ತೊಡಗಿದರು.

“ಏನು ಮೈಗೆ ಸರಿಯಾಗಿಲ್ಲವೆ ಮಾವಯ್ಯ ?”–ನಾನು ಕೇಳಿದೆ.

“ಕಣ್ಣೇ ಕಾಣಿಸುವುದಿಲ್ಲವಪ್ಪ. ಹೊರಕ್ಕೆ ಎಲ್ಲಿ ಹೋಗಲಿ ? ಹಾಸಿಗೆಯ ಮೇಲೆ ಸುಮ್ಮನೆ ರಾಮನಾಮ ಜಪಿಸುತ್ತ ಕುಳಿತಿರುತ್ತೇನೆ.”

“ಕಣ್ಣಿನಲ್ಲಿ ಸದಾ ಹೀಗೆಯೇ ನೀರು ಸುರಿಯುತ್ತ ಇರುತ್ತದೆಯೋ ?”

"ನಿಂತಿತ್ತು ರಾಮು. ಇವೊತ್ತು ಮತ್ತೆ ಸುರಿಯತೊಡಗಿದೆ, ಅಷ್ಟೆ. ಕಣ್ಣು ಇಂಗಿಹೋದಮೇಲೆ ನೀರು ಸುರಿಯುವುದೇ ಇಲ್ಲ ಅಂದುಕೊಂಡಿದ್ದೆ. ಇವೊತ್ತು ಸುರಿಯುವುದು ನೋಡಿ ನನಗೆ ಆಶ್ಚರ್ಯವಾಗಿದೆ."

"ಬೆಂಗಳೂರಿಗೆ ಬನ್ನಿ, ಮಾವಯ್ಯ. ಕಣ್ಣಾಸ್ಪತ್ರೆಗೆ ತೋರಿಸೋಣ. ಕಣ್ಣು ಬಂದರೂ ಬರುತ್ತೆ."

"ಹೋದ ಕಣ್ಣು ಮತ್ತೆ ಬರುತ್ತೆಯೇ ಅಪ್ಪ ?" ಕಣ್ಣಿನಲ್ಲಿ ನೀರು ಜಳ ಜಳನೆ ಸುರಿಯುತ್ತಲೇ ಇತ್ತು.

"ತಕ್ಕ ಚಿಕಿತ್ಸೆಯಾದರೆ ಬಂದರೂ ಬರಬಹುದು."

"ನಿನಗೆ ಭ್ರಾಂತಿ ರಾಮು. ಕಣ್ಣು ಕಿತ್ತುಕೊಂಡ ಶಿವನೇ ಪ್ರತ್ಯಕ್ಷ ವಾಗಿ ಬಂದರೂ ಆ ಕಣ್ಣು ಕೊಡಲಾರ. ನಮ್ಮ ಕರ್ಮಫಲ ನಾವು ಅನುಭವಿಸ ಬೇಕಪ್ಪ."

"ಸಂಜೀವಯ್ಯ ಬರುವುದು ಇನ್ನೂ ಹೊತ್ತಾಗುತ್ತೋ? ನಾನು ಬರ್ತೀನೆ" ಎಂದು ಎದ್ದೆ.

ಇದ್ದಕ್ಕಿದ್ದ ಹಾಗೆ ಸಂಜೀವಯ್ಯನ ತಾಯಿ ಬಂದು "ಸಂಜೀವಾ.... ಸಂಜೀವಾ...." ಎಂದು ನನ್ನ ಮುಂದೆ ಒರಲುತ್ತ ಕೆಡೆದರು.

"ನಮ್ಮ ಸಂಜೀವ ಕಣ್ಣುಮುಚ್ಚಿಕೊಂಡು ಇಂದಿಗೆ ವರ್ಷದ ಮೇಲಾಯಿ ತಪ್ಪ. ನೀನು ಪೇಪರಿನಲ್ಲಿ ಓದಲಿಲ್ಲವೇ? ಮೋಟಾರಿಗೆ ಸಿಕ್ಕಿ ಸತ್ತುಹೋದನಲ್ಲಪ್ಪ! ಮೃತ್ಯು ಮೋಟಾರು ಭೂತದ ರೂಪದಲ್ಲಿ ಬೆನ್ನ ಹಿಂದೆ ಬಂದು ಎರಗಿತೆಂದ ಮೇಲೆ ಎಂಥ ವಜ್ರದೇಹ ಇಟ್ಟುಕೊಂಡುತಾನೆ ಏನು ಪ್ರಯೋಜನವಪ್ಪ? ನನ್ನ ಈ ಜರ್ಜರಿತ ದೇಹ, ಅಸ್ಥಿಪಂಜರ, ಬಿದ್ದುಹೋಗಬಾರದಿತ್ತೆ ? ಗಟ್ಟಿಮುಟ್ಟಾ ಗಿದ್ದ ನನ್ನ ಒಬ್ಬನೇ ಮಗ ಯಾವ ರೋಗಕ್ಕೂ ತುತ್ತಾಗದೆ ನನ್ನ ಕಣ್ಣ ಮುಂದೆ ಹಾಗೆ ಸಾಯಬೇಕಾಗಿತ್ತೆ ? ನನ್ನ ಬಾಳಿನ ಕಣ್ಣು ಅವನೇ ಹೋದ ಮೇಲೆ ಈ ಕಣ್ಣು ಬಂದರೆಷ್ಟು ಬಿಟ್ಟರೆಷ್ಟು ?" ಎಂದು ಸಂಜೀವಯ್ಯನ ತಂದೆ ನಿಧಾನವಾಗಿ ಅಳಲನ್ನು ಅದುಮಿ ನುಡಿದರು.

ನಾನು ಅವಾಕ್ಕಾಗಿ ಕುಳಿತಿದ್ದೆ.

"ಜಗಲಿ ಜೋಯಿಸರು ಹೇಳಿದ್ದ ಭವಿಷ್ಯ ನಿಜವಾಯಿತಪ್ಪ. ಅವನು ಅಲ್ಪಾಯು ಎಂದಿದ್ದರು. ನಾನು ಈ ಘೋರ ಭವಿಷ್ಯವನ್ನ ಅವನಿಗೂ ತಿಳಿಸಿರ ಲಿಲ್ಲ. ಸಂಜೀವ ಅದು ಹೇಗೋ ಅರಿತುಕೊಂಡುಬಿಟ್ಟಿದ್ದ ಅಂತ ಕಾಣುತ್ತೆ, ಸಾವನ್ನ ಗೆಲ್ಲುತ್ತೇನೆ, ವಜ್ರದೇಹಿಯಾಗುತ್ತೇನೆ ಅಂತ ಬೇವಿನಕೊಪ್ಪಿನ ಸಾಧನೆ ಮಾಡಿದ್ದ. ಯಮಧರ್ಮರಾಯನನ್ನು ವಂಚಿಸುವುದಕ್ಕಾಗುತ್ತೆಯೇ, ರಾಮು ?"

ಬರಿಯ ಮೌನವೇ ನನ್ನ ಉತ್ತರವಾಗಿತ್ತು.

ಹಿಂದಿರುಗಿ ಬರುವಾಗ, ನಳನಳಿಸುವ ಚಿಗುರೊಡೆದಿದ್ದ ಆ ಬೇವಿನ ಗಿಡ ಮತ್ತೆ ಕಣ್ಣಿಗೆ ಬಿತ್ತು. ಯಾವ ಗಿಡವನ್ನು ನೋಡಿ ನಗುತ್ತ ಒಳಹೊಕ್ಕಿದ್ದೆನೋ ಅದೇ ಗಿಡವನ್ನು ನೋಡಿ ಕಂಬನಿಯಿಡುತ್ತ ನಡೆದು ಬಂದೆ. ದುಃಖದಲ್ಲಿ ಮುಳುಗಿದ್ದ ಸಂಜೀವಯ್ಯನ ತಂದೆ ತಾಯನ್ನು ನೋಡಿದಾಗ ಬಾರದ ಕಣ್ಣೀರು ಆ ಗಿಡವನ್ನು ಮತ್ತೆ ಕಂಡಾಗ ತಡೆಯಲಾಗದಂತೆ ಉಕ್ಕಿತು.

ಕಹಿಯಾದ ಬೇವು ಕೂಡ ಸಂಜೀವಯ್ಯನಿಗೆ ಸವಿಯಾಗಿತ್ತು: ಬೇವಿನ ಗಿಡವೇ ಅವನ ಸವಿನೆನಪಾಗಿ ಉಳಿಯಿತು. ಸವಿನೆನಪು ಎನ್ನುವುದು ಉಪಚಾರೋಕ್ತಿ ; ನಿಜವಾಗಿಯೂ ಕಹಿ ನೆನಪು.